# ವಾರ್ತಕನು ವರ್ತಕನು




**ರಚಿತ :** ತ್ರಿಮತ ಏಕೈಕ ಗುರುವು

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (80) ದಶ ಸಪ್ತಾಧಿಕ ಗ್ರಂಥಕರ್ತ
ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಿತ, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**





# ವಾರ್ತಕನು–ವರ್ತಕನು


ರಚಿತ

**ತ್ರಿಮತ ಏಕೈಕ ಗುರುವು**

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (72) ದಶ ಸಪ್ತಾಧಿಕ ಗ್ರಂಥಕರ್ತ
ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಿತ, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

ತೆಲುಗುನಿಂದ ಕನ್ನಡಕ್ಕೆ ಅನುವಾದಕರು

**ಇಂದೂಶ್ರೀ ಕವಿತ, ಇಂದೂಶ್ರೀ ಶ್ರೀದೇವಿ**






ಗ್ರಂಥ ಮುದ್ರಣ

**ಇಂದೂ ಜ್ಞಾನ ವೇದಿಕೆ** (Regd. No : 168/2004)
(Estd. in 1978 - Regd.No.: 168/2004)

ತ್ರೈತ ಶಕ : 38 ಪ್ರಥಮ ಮುದ್ರಣ : ಜುಲೈ–2016
ಪ್ರತಿಗಳು : 1000 **ಬೆಲೆ. 45/–**

## ಇಂದೂ ಜ್ಞಾನವೇದಿಕೆ ಪ್ರಚರಣೆಗಳು

01. ತ್ರೈತ ಸಿದ್ಧಾಂತ ಭಗವದ್ಗೀತೆ.
02. ಆಧ್ಯಾತ್ಮಿಕ ಪ್ರಶ್ನೆ-ಉತ್ತರಗಳು.
03. ಧರ್ಮ-ಅಧರ್ಮ.
04. ಇಂದೂತ್ವವನ್ನು ಕಾಪಾಡೋಣ.
05. ಯಜ್ಞಗಳು (ಸತ್ಯವಾ-ಅಸತ್ಯವಾ?)
06. ದೆವ್ವಗಳಹಾಗೂ-ಭೂತಗಳ
ಯಥಾರ್ಥಸಂಘಟನೆಗಳು.
07. ಸತ್ಯಾನ್ವೇಷಣಾ ಕಥೆ.
08. ಮಂತ್ರ-ಮಹಿಮೆ (ಸತ್ಯವಾ-ಅಸತ್ಯವಾ)
09. ಶ್ರೀ ಕೃಷ್ಣನು ದೇವರಾ, ಭಗವಂತನಾ.
10. ಗೀತಾ ಪರಿಚಯ.
11. ಕಲಿಯುಗ (ಎಂದಿಗೂ ಯುಗಾಂತವಲ್ಲ).
12. ಜನನ ಮರಣ ಸಿದ್ಧಾಂತ.
13. ಮರಣ ರಹಸ್ಯ.
14. ಪುನರ್ಜನ್ಮ ರಹಸ್ಯ.
15. ತ್ರೈತಾಕಾರ ರಹಸ್ಯ
(ತ್ರೈತಾಕಾರ ಬೆರ್ಮುಡಾ).
16. ಕಥೆಗಳ ಜ್ಞಾನ.
17. ಗಾದೆಗಳ ಜ್ಞಾನ.
18. ಒಗಟುಗಳಲ್ಲಿ ಜ್ಞಾನ.
19. ತತ್ತ್ವಗಳ ಜ್ಞಾನ.
20. ಬೈಗುಳಲ್ಲಿ ಜ್ಞಾನ-
ಆಶೀರ್ವಾದಗಳಲ್ಲಿ ಅಜ್ಞಾನ.
21. ಗೀತಂ-ಗೀತ (ಹಾಡುಗಳ ಜ್ಞಾನ).
22. ತತ್ತ್ವಾರ್ಥ ಗೊಂಬೆಗಳ ಜ್ಞಾನ.
23. ದೇವಾಲಯ ರಹಸ್ಯಗಳು.
24. ಇಂದೂ ಸಂಪ್ರದಾಯಗಳು.
25. ನಮ್ಮ ಹಬ್ಬಗಳು.
(ಹೇಗೆ ಮಾಡಬೇಕೋ ತಿಳಿದಿದೆಯಾ?)
26. ಜ್ಯೋತಿಷ್ಯಶಾಸ್ತ್ರ
(ಶಾಸ್ತ್ರವಾ-ಅಶಾಸ್ತ್ರವಾ?)
27. ತಾಯಿ ತಂದೆ.
28. ಗುರುಪ್ರಾರ್ಥನಾಮಂಜರಿ.
29. ತ್ರೈತಾರಾಧನೆ.
30. ಸಮಾಧಿ.
31. ಪ್ರಬೋಧ.
32. ಸುಬೋಧ.
33. ಪ್ರಸಿದ್ಧ ಬೋಧನೆ.
34. ಸುಪ್ರಸಿದ್ಧಬೋಧನೆ.
35. ಸಿಲುಬೆ ದೇವರಾ?
36. ಮತಾತೀತ ದೇವರ ಮಾರ್ಗ.
37. ದೇವರ ಗುರುತು-963.
38. ಮತ-ಪಥ.
39. ಪ್ರಬೋಧಾನಂದ ನಾಟಕಗಳು.
40. ಇಂದೂ ಕ್ರೈಸ್ತವನಾ?
41. ನಿಗೂಢ ತತ್ತ್ವಾರ್ಥ ಬೋಧಿನಿ.
42. ಆತ್ಮ ಲಿಂಗಾರ್ಥ.
43. ನಾಸ್ತಿಕರು-ಆಸ್ತಿಕರು.
44. ಹೇತುವಾದ-ಪ್ರತಿವಾದ.
45. ಗುತ್ತಾ.
46. ಪ್ರಬೋಧ ತರಂಗಗಳು.
47. ತ್ರೈತ ಸಿದ್ಧಾಂತ.
48. ರೂಪ ಬದಲಾದ ಗೀತೆ.
49. ಉಪನಿಷತ್‌ಗಳಲ್ಲಿ ಲೋಪಗಳು.
50. ಪ್ರಥಮ ದೈವಗ್ರಂಥ ಭಗವದ್ಗೀತೆ.
51. ದ್ರಾವಿಡ ಬ್ರಾಹ್ಮಣ.
52. ತೀರ್ಪು.
53. ಕರ್ಮಪತ್ರ.

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ರಚನೆಗಳು

## ಇಂದೂ ಜ್ಞಾನವೇದಿಕೆ ಪ್ರಚರಣೆಗಳು

54. ಪ್ರವಕ್ತರು ಯಾರು?
55. ಧರ್ಮಶಾಸ್ತ್ರ ಯಾವುದು?
56. ಮತಾಂತರ ದೈವದ್ರೋಹ.
57. ತ್ರೈತಶಕ ಪಂಚಾಂಗ.
58. ತ್ರೈತ ಸಿದ್ಧಾಂತ ಆಧ್ಯಾತ್ಮಿಕ ಘಂಟು.
59. ಜೀಹಾದ್ ಎಂದರೇ ಯುದ್ಧವಾ?
60. ಮೂರು ಗ್ರಂಥಗಳು, ಇಬ್ಬರು ಗುರುಗಳು.
61. ದೇವರ ಜ್ಞಾನ ಕಬ್ಜಾ ಆಗಿದೆ.
62. ಅಜ್ಞಾನದಲ್ಲಿ ಉಗ್ರವಾದ ಬೀಜಗಳು.
63. ವಾರ್ತಕನು–ವರ್ತಕನು.
64. ದೇವರ ಚಿಹ್ನೆ.
65 ಯಾವುದು ನಿಜವಾದ ಜ್ಞಾನ?
66. ಪ್ರತಿಮೆ X ವಿಗ್ರಹ – ದೈವ X ದೆವ್ವ.
67. ಮರಣದ ನಂತರ ಜೀವನ.
68. ಯಾವ ಮತದಲ್ಲಿ ಎಷ್ಟು ಮತ ದ್ವೇಷ.
69. ಸ್ವರ್ಗ ಇಂದ್ರಲೋಕವಾ! ನರಕ ಯಮರಾಜ್ಯವಾ!!
70. ಮಧ್ಯಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
71. ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
72. ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು (ಎರಡನೇ ಭಾಗ)
73. ಇಂದೂ ಮತದಲ್ಲಿ ಸಿದ್ಧಾಂತಕರ್ತರು.
74. ಒಂದು ಮಾತು ಮೂರು ಗ್ರಂಥಗಳು.
75. ಲೂ ಎಂದರೇ ಏನು? (ತೆಲುಗು)
76. ಆದಿತ್ಯ.
77. ಗಿಡ ಮೊದಲಾ! ಬೀಜ ಮೊದಲಾ?
78. ಒಬ್ಬನೇ ಇಬ್ಬರು.



# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

01. ಸಂತಕಮು.
02. ಸಾಂಪ್ರದಾಯಮು.
03. ತ್ರೈತಶಕಮು.
04. ಕೋಡಿಪುಂಜು–ಪಾದರಸಮು.
05. ಯುಗಮು–ಯೋಗಮು.
06. ನೈಜಂ–ಸಹಜಂ.
07. ಆತ್ಮಕು ವೆಂಟ್ರುಕ ಗುರ್ತು.
08. ಪೈತ್ಯಂ–ಸೈತ್ಯಂ.
09. ಶೈವಮು–ವೈಷ್ಣವಮು.
10. ಇಂದೂಮಹಾಸಮುದ್ರಂ.
11. ಸೃಷ್ಠಿ–ಸೃಷ್ಠಿಕರ್ತ.
12. ಕಾಯ–ಪಂಡು–ಕಾಯ.
13. ಜ್ಞಾನಮು–ವಿಜ್ಞಾನಮು.
14. ವಾರ–ಮಾಸ–ವತ್ಸರ.
15. ಸೇಕೂವಲಿ–ಕೂಲಿಸೇವಾ.
16. ಧರ್ಮಮು–ಅಧರ್ಮಮು.
17. ಏಕ್‌ನಿರಂಜನ್–ಅಲಕ್‌ನಿರಂಜನ್.
18. ಗುರುವುಲೇನಿವಿದ್ಯ–ಗುಡ್ಡಿವಿದ್ಯ.
19. ಬಟ್ಟತಲ.
20. ಭಗವಂತುಡು.
21. ದ್ರಾವಿಡುಲು – ಆರ್ಯುಲು.
22. ಪ್ರಭುವು – ಪ್ರಭುತ್ವಂ.
23. ಭೂತಂ – ಮಹಾಭೂತಂ.
24. ಪ್ರಭು – ಪ್ರಜ.
25. ಯಾದವ್.
26. ಪುಸ್ತಕಮು–ಗ್ರಂಥಮು.
27. ವೆಲುಗುಬಂಟು.
28. ಪ್ರಕೃತಿ–ವಿಕೃತಿ.
29. ಮಾಟ–ಮಂದು.
30. ಏಕತ–ಏಕಾಗ್ರತ.
31. ಹರಿಕಾಲು–ಹರಿಚೇಯಿ.
32. ಪುಟ್ಟಗೋಸಿ–ಮೊಲತ್ರಾಡು.
33. 1 2 3 ಗುರುಪೌರ್ಣಮಿ.
34. ಚಮತ್ಕಾರ–ಆತ್ಮ.
35. ಕ್ಷಮಿಂಚರಾನಿ ಪಾಪಮು.
36. ಮಾಯಕುಡು–ಅಮಾಯಕುಡು.
37. ಮರಣಮು–ಶರೀರಮು.
38. ದ್ವಿತೀಯುಡು–ದ್ವಿತೀಯುಡು.
39. ಎದಮೀದಮುದ್ರ–ತಲ್ಲಿ ತಂಡ್ರಿ ಗುರ್ತು.
40. ಸೇವಾಶಾತಮು.
41. ಬಯಟಿ ಸಮಾಜಂ–ಲೋಪಲಿ ಸಮಾಜಂ.
42. ಶ್ರೀಕೃಷ್ಣಾಷ್ಟಮಿ.
43. ಪ್ರಪಂಚ ಶ್ರದ್ಧ–ಪರಮಾತ್ಮ ಶ್ರದ್ಧ.
44. ತಲ್ಲಿ ತಂಡ್ರಿ
45. ದೇವುನಿ ಜ್ಞಾನಮು–ಮಾಯ ಮಹತ್ಯಮು.
46. ಸಮಾಧಿ.
47. ತಲ್ಲಿ ತಂಡ್ರಿ – ಗುರುವು ದೈವಮು.
48. ಕಲಿಯುಗಮು.
49. ಮತಮು–ಪಥಮು.
50. ದಿವ್ಯಖುರಾನ್–ಹದೀಸು.
51. ತಲ್ಲಿ.
52. ಪುಟ್ಟುಟ – ಗಿಟ್ಟುಟ.
53. ಗೋರು – ಗುರು.
54. ಆತ್ಮ.
55. ಕರ್ಮ ಮರ್ಮಮು.
56. ತಾತ.
57. ಗುರುಪೌರ್ಣಮಿ.
58. ಯೋಗೀಶ್ವರುಲ ಜನ್ಮದಿನ ಸಂದೇಶಮು.
59. ಶ್ರೀಕೃಷ್ಣಜನ್ಮ ಮಧುರ.
60. ಇಂದುವು – ಹಿಂದುವು.
61. ಸ್ತ್ರೀ–ಪು/ಲಿಂಗಮು.

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

62. ಆತ್ಮಪನಿ.
63. ತ್ರೈತ ಸಿದ್ಧಾಂತಮು.
64. ದೇಶಂ ಮೋಸಂ – ದೇಹಂ ಮೋಹಂ.
65. ಜೀರ್ಣ+ಆಶಯಮು.
66. ಮೇಘಂ ಒಕಭೂತಂ– ರೋಗಂ ಒಕಭೂತಂ.
67. ದೇವುನಿಕಿ ಮತಮುನ್ನದಾ?
68. ಸಹಜ ಮರಣಂ–ತಾತ್ಕಾಲಿಕ ಮರಣಂ
69. ಅಧರ್ಮ ಆರಾಧನಲು.
70. ಏದಿ ಧರ್ಮಮು.
71. ನಿದರ್ಶ – ನಿರೂಪ.
72. ಪುಟ್ಟಿನರೋಜು ಎವ್ವರಿಕೀ ರಾದು.
73. ನಟಿಂಚೇ ಆತ್ಮ.
74. ಮೂಡು ಪುಟ್ಟುಕಲು– ರೆಂಡು ಜಾಗಾಲು.
75. ಶ್ರೀ ಕೃಷ್ಣುಡು ಎವರು?
76. ಸಂಚಿತ ಕರ್ಮ.
77. ಗುರುವು ಎವರು?
78. ಕರ್ಮಲೇನಿ ಕೃಷ್ಣುಡು– ಕರ್ಮಉನ್ನ ಕೃಷ್ಣುಡು.
79. ಭಯಂ.
80. ಸುಖಮು–ಆನಂದಮು.
81. ದಶ–ದಿಶಲು.
82. ಆಡಿಂಚೇ ಆತ್ಮ.
83. ಇಚ್ಛಾಧೀನ ಕಾರ್ಯಮುಲು– ಅನಿಚ್ಛಾಧೀನ ಕಾರ್ಯಮುಲು.
84. ಟಕ್ಕುಟಮಾರಾ, ಇಂದ್ರಜಾಲ ಮಹೇಂದ್ರಜಾಲ, ಗಜಕರ್ಣ ಗೋಕರ್ಣ.
85. ಸ್ವಾರ್ಥ ರಾಜಕೀಯಂ (ಸ್ವ+ಅರ್ಥ ರಾಜಕೀಯಂ).
86. ಮೂಡು ನಿರ್ಮಾಣಾಲು– ಒಕ ಪರಿಶುಭ್ರತ.
87. ಏದಿ ಶಾಸ್ತ್ರಮು?
88. ತೆಲುಗುಲೋ ಮೂಡು– ಆರು–ತೊಮ್ಮಿದಿ
89. 6–3=6
90. ಗುರ್ತಿಂಪಬಡನಿವಾಡು ಗುರುವು.
91. ಜ್ಞಾನಮು ದಗ್ಗರ ಜಾಗ್ರತ್ತ!
92. ಚಂದ್ರಾಕಾರಮು (ಬಟ್ಟತಲ).
93. ಮತಮುಲಲೋ ಪವಿತ್ರ ಯುದ್ಧಮು.
94. ಮೂಡು ಗ್ರಂಥಮುಲು.
95. ಏಡು ಆಕಾಶಮುಲು.
96. ದೈವಗ್ರಂಥಮು.
97. ಜ್ಞಾನಮು ಕಬ್ಜಾ ಅಯ್ಯಿಂದಿ.
98. ಭಕ್ತಿ–ಭಯಮು.
99. ಜ್ಞಾನಶಕ್ತಿ.
100. ಕಾಲಜ್ಞಾನ ವಾಕ್ಯಮುಲು.
101. ಅರ್ಥಮು–ಅಪಾರ್ಥಮು.
102. ತೋಲೇವಾಡು.
103. ಗುರು ಚಿಹ್ನಂ.
104. ಭಕ್ತಿ–ಶ್ರದ್ಧಲು.
105. ದೇವುಡು ಇದ್ದರಾ! ಒಕ್ಕರಾ!!
106. ಪುರುಷೋತ್ತಮ.
107. ಮತದ್ವೇಷಮು.
108. ನೀ ವೆನುಕ ವಾಡು.
109. ಗ್ರಂಥಮು – ಬೋಧ.
110. ಆಟ – ದೋಬೂಚುಲಾಟ.
111. ಪ್ರಜಲು – ಮಾನವುಲು.
112. ಆಸ್ತಿ – ದೋಸ್ತಿ
113. ದಂತಮು–ಅಂತಮು.
114. ಆಧ್ಯಾತ್ಮಿಕ ಪ್ರಶ್ನಲು–ಜವಾಬುಲು.



# ಇಂದೂ ಜ್ಞಾನವೇದಿಕೆ ಪುಸ್ತಕಗಳು ದೊರೆಯುವ ವಿಳಾಸ

## ಪ್ರಬೋಧಾಶ್ರಮ (ಶ್ರೀ ಕೃಷ್ಣಮಂದಿರ)

ಚಿನ್ನಪೊಡಮಲ (ಗ್ರಾ), ತಾಡಿಪತ್ರಿ (ಮಂ), ಅನಂತಪುರಂ (ಜಿಲ್ಲೆ). A.P

Cell : **ಶ್ರೀನಿವಾಸ**–09705864675, **ಲಕ್ಷ್ಮಿಣಾರಾಯಣಾಚಾರಿ**–09440556968.

**ವೆಂಕಟೇಶ್**–08096816963.

(ಇಂದೂ ಜ್ಞಾನ ವೇದಿಕೆ ಸದಸ್ಯರು)

**ಎ. ರಾಘವೇಂದ್ರ ಶ್ರೇಷ್ಠಿ**
ಶ್ರೀಕೃಷ್ಣಾ ಮೆಡಿಕಲ್ಸ್, ಪಟೇಲ್‌ನಗರ್, 3ನೇ ರಸ್ತೆ, ಹೊಸಪೇಟೆ, ಬಳ್ಳಾರಿ (ಜಿಲ್ಲೆ). K.A
Cell:9611133635, 9731816452, 09440645005

**ಜಿ. ರಾಧಾಕೃಷ್ಣಾ ರೆಡ್ಡಿ**
ಪ್ರಬೋಧಾ ನಿಲಯ. ರಿಂಗ್ ರೋಡ್, ಮರಲೂರು, ತುಮಕೂರು (ಜಿ).
ಪಿನ್–572150, Cell : 9448177812

**ಶಿವರಾಜ**
(ಸಾ)(ಕಿ) ಕುಕನೂರು (ಪೊ)
ಚಿಕ್ಕಸೂಗುರು (ತಾ), ರಾಯಚೂರು (ಜಿ)
Cell : 98443 69516

**R.S. ವೀರಾಚಾರಿ**
ಕತ್ತರಗುಪ್ಪೆ, ವಾರ್ಡ್.ನೆಂ.–38,
ಬೆಂಗಳೂರು–560085
Cell : 9036982829

**G. ಮನೋಹರ್**
ಮಲ್ಲಸಂದ್ರ, ಟಿ. ದಾಸರಹಳ್ಳಿ
ಬೆಂಗಳೂರು–560057
Cell : 7411459912, 9448452963.

**B. ವಾತ್ಸಲ್ಯ**
ರೈಲ್ವೇ ಸ್ಟೇಷನ್ ಹತ್ತಿರ,
ಪಿ.ಬಿ.ರೋಡ್, ದಾವಣಗೆರೆ–577002
Cell : 9901534677, 8880666529

**ಬಸವರಾಜ ಅಂಗಡಿ**
(ಸಾ) (ಪೊ) ಪೋತ್ನಾಳ,
(ತಾ) ಮಾನವಿ, ರಾಯಚೂರು (ಜಿ)
Cell : 9632418716

**ಸೂರ್ಯ ಪ್ರಕಾಶ**
ಟೈಪ್ 'ಸಿ' (ಸಾ) (ಪೊ) ಶಕ್ತಿನಗರ
(ತಾ), ರಾಯಚೂರು (ಜಿ)
Cell : 9611183107, 9164886981

**ಲೀಲಾವತಿ**
ಮಾರುತಿ ಟೆಸ್ಟ್ ರೋಡ್, ಚಾಮರಾಜ ಮೊಹಲ್ಲ, ಮೈಸೂರ್–547097
Cell : 9986369118

**T.V. ರಮಣ**
ಕತ್ತರಗುಪ್ಪೆ, ವಾರ್ಡ್.ನೆಂ. –38,
ಬೆಂಗಳೂರು–560068
Cell : 08970772028, 07411459912, 07406039453

**M. ನಾರಾಯಣರೆಡ್ಡಿ**
(Bsc census department retired supervisor)
ರಾಮಗುಂಡನಲ್ಲಿ ಪೋಸ್ಟ್, ವೈಟ್ ಫೀಲ್ಡ್ ರೋಡ್,
ಬೆಂಗಳೂರು–560066
Cell : 9482516023

# ಯೋಗೀಶ್ವರರ ಸಂಚಲನಾತ್ಮಕ ರಚನೆಗಳ ಸಾರಾಂಶ

1. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಅಕ್ಷರ ಸಮುದಾಯವೇ, ಆತ್ಮ ಸಮಾಚಾರವಾಗಿದೆ. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಕ್ಷಯ ಅಕ್ಷಯ ಸಮಾಚಾರ, ಪರಮಾತ್ಮನ ಸಮಾಚಾರ ಇದೆ.
2. ತ್ರೈತ ಸಿದ್ಧಾಂತ ಸಂಬಂಧ ಗ್ರಂಥಗಳನ್ನು ಭೌತಿಕವಾಗಿ ಬರೆದಿರುವುದು ಯೋಗೀಶ್ವರರು. ತ್ರೈತಸಿದ್ಧಾಂತ ಅನುಬಂಧ ಗ್ರಂಥಗಳಲ್ಲಿ ಅಭೌತಿಕವಾಗಿ ಯೋಗಶಕ್ತಿ ಇದೆ.
3. ತ್ರೈತ ಸಿದ್ಧಾಂತ ಇಂದೂ (ಹಿಂದೂ) ಧರ್ಮಗಳಲ್ಲಿ ವಿಪ್ಲವಾತ್ಮಕವಾದುದು. ತ್ರೈತ ಸಿದ್ಧಾಂತ ಗ್ರಂಥದಲ್ಲಿನ ಜ್ಞಾನ ಸಂಚಲನಾತ್ಮಕವಾದುದು, ಓದಿ ನೋಡಿರಿ.
4. ತ್ರೈತ ಸಿದ್ಧಾಂತ ಲೋಕದಲ್ಲಿ ಎಲ್ಲದಕ್ಕಿಂತ ದೊಡ್ಡದು. ತ್ರೈತ ಸಿದ್ಧಾಂತ ಗ್ರಂಥಗಳು ಎಲ್ಲಾ ಗ್ರಂಥಗಳನ್ನು ಮೀರಿರುವವು. ಅದರ ರಚನಗಾರ ಯೋಗಿಗಳಿಗೆ ಈಶ್ವರನಾದ ಯೋಗೀಶ್ವರನು.
5. ತ್ರೈತ ಸಿದ್ಧಾಂತ ಗ್ರಂಥಗಳು ಕಾಣಿಸಿದರೆ ದುಷ್ಟಶಕ್ತಿಗಳು ಭಯದಿಂದ ನಡುಗುತ್ತವೆ. ತ್ರೈತ ಸಿದ್ಧಾಂತ ಗ್ರಂಥಗಳನ್ನು ಹತ್ತಿರ ಇಟ್ಟುಕೊಂಡರೆ ಯೋಗಶಕ್ತಿಗೆ ತಾಳಲಾರದೆ ಭಯಪಟ್ಟು ಹೋಗುತ್ತವೆ.
6. ತ್ರೈತ ಸಿದ್ಧಾಂತ ಜ್ಞಾನ ಭಗವದ್ಗೀತೆ ನಂತರ ಹೇಳಲಾದ ಅತ್ಯುತ್ತಮ ಜ್ಞಾನ. ತ್ರೈತ ಸಿದ್ಧಾಂತ ಗ್ರಂಥದಲ್ಲಿ ಕೃಷ್ಣನು ಮೊದಲು ಹೇಳದ ಜ್ಞಾನವನ್ನೂ ಸಹ ಯೋಗೀಶ್ವರರು ಹೇಳಿದ್ದಾರೆ.
7. ತ್ರೈತ ಸಿದ್ಧಾಂತ ಜ್ಞಾನ ಮಾನವ ಜೀವನಕ್ಕೆ ದೊಡ್ಡ ಪ್ರಕಾಶವು. ತ್ರೈತ ಸಿದ್ಧಾಂತದ ಬೆಳಕಿನೊಳಗೆ ಹೋದವನಿಗೆ ಅದು ದೈವಶಕ್ತಿ ಎಂದು ತಿಳಿಯುತ್ತದೆ.
8. ತ್ರೈತ ಸಿದ್ಧಾಂತ ಭಗವದ್ಗೀತೆಯನ್ನು ಬರೆದಿರುವುದು ಯೋಗೀಶ್ವರರು. ಆದ್ದರಿಂದ ತ್ರೈತ ಸಿದ್ಧಾಂತ ಎಂದರೆ ಏನೋ, ಅದು ಎಷ್ಟು ದೊಡ್ಡದೋ ತಿಳಿದಿದೆ.
9. ತ್ರೈತ ಸಿದ್ಧಾಂತವನ್ನು ಕುರಿತು ತಿಳಿದರೆ, ಯೋಗೀಶ್ವರರ ಗ್ರಂಥಗಳನ್ನು ಓದಿದರೆ, ಯಾವ ಮತಸ್ಥನಾದರೂ ಒಪ್ಪಿಕೊಳ್ಳುತ್ತಾನೆ, ಅದನ್ನು ಆಚರಿಸುತ್ತಾನೆ.
10. ತ್ರೈತ ಸಿದ್ಧಾಂತವನ್ನು ಪ್ರತ್ಯಕ್ಷವಾಗಿ ಭಗವಂತನು ಹೇಳಿರುವುದು. ಆದ್ದರಿಂದ ಎಲ್ಲಾ ಮತಗಳ ಸಾರಾಂಶವು ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಇದೆ.
11. ತ್ರೈತ ಸಿದ್ಧಾಂತ ಗ್ರಂಥಗಳು ವ್ಯಕ್ತಿ ಬರೆದಿರುವವು ಅಲ್ಲ, ವ್ಯಕ್ತಿಯಲ್ಲಿನ ಶಕ್ತಿ ಬರೆದಿರುವವು. ಆದ್ದರಿಂದ ಎಲ್ಲ ರಹಸ್ಯಗಳೇ ಓದಿ ತಿಳಿದುಕೊಳ್ಳಿ.
12. ತ್ರೈತ ಸಿದ್ಧಾಂತ ಭಗವದ್ಗೀತೆ, ಬೈಬಲ್, ಖುರಾನ್ ಗ್ರಂಥಗಳಲ್ಲಿ ಇದೆ. ಆದರೂ ಹಿಂದೂಗಳಿಗಾಗಲಿ, ಕ್ರೈಸ್ತವರಿಗಾಗಲಿ, ಮುಸ್ಲಿಮ್‌ರಿಗಾಗಲಿ ಆ ವಿಷಯ ತಿಳಿದಿಲ್ಲ.

**ತಪ್ಪದೆ ಓದಿರಿ!** **ಓದಿಸಿರಿ!!**

# ದೇವಾಲಯ ರಹಸ್ಯಗಳು

ಪ್ರಪಂಚ ಪಟದಲ್ಲಿ ಭಾರತದೇಶ ಆಧ್ಯಾತ್ಮಿಕಕ್ಕೆ ಹುಟ್ಟಿದ ಮನೆಯಂತೆ ಹೇಳಿದ್ದರೂ ದಕ್ಷಿಣ ಭಾರತದೇಶ ಸ್ವಚ್ಛವಾದ ದೈವ ಜ್ಞಾನಕ್ಕೆ ಬೆನ್ನೆಲುಬಿನಂತಹದು. ದಕ್ಷಿಣ ಭಾರತದೇಶದಲ್ಲಿ ನಿರ್ಮಿಸಲಾಗಿರುವ ದೇವಾಲಯಗಳು, ಸೃಷ್ಠಿ ಆದಿಯಲ್ಲಿ ದೇವರ ಜ್ಞಾನಕ್ಕೆ ಸಂಕೇತಗಳಾಗಿ ಮತ್ತು ಸಂದೇಶಗಳಾಗಿ ಪ್ರಕಾಶಿಸುತ್ತಿವೆ. ದೇವಾಲಯಗಳಲ್ಲಿನ ವಿಧಿವಿಧಾನಗಳಿಗೆ ಸರಿಯಾದ ಅರ್ಥ ತಿಳಿಯದ ದುರದೃಷ್ಟಕರ ಪರಿಸ್ಥಿತಿಯಲ್ಲಿ ಈದಿನ ನಾವಿದ್ದೇವೆ. ನಮ್ಮ ನಂತರ ಪೀಳಿಗೆಯವರು ಕೇಳುವ ಪ್ರಶ್ನೆಗಳಿಗೆ ಉತ್ತರ ಹೇಳಲಾರದ ಸ್ಥಿತಿಯಲ್ಲಿ ದೇವಾಲಯಗಳ ನಿರ್ಮಾಣವನ್ನು ಕೈಯ್ಯಾರಾ ನಾವೇ ಪ್ರಶ್ನಾರ್ಥಕ ಮಾಡಿಕೊಳ್ಳುತ್ತಿದ್ದೇವೆ. ಆಧ್ಯಾತ್ಮಿಕ ರಹಸ್ಯಗಳನ್ನು ದೇವಾಲಯಗಳಲ್ಲಿ ಹೆಜ್ಜೆ ಹೆಜ್ಜೆಗೂ ಆದಿನದ ಜ್ಞಾನಿಗಳು ನಿಕ್ಷಿಪ್ತ ಮಾಡಿರುವಾಗ, ಅವುಗಳನ್ನು ಅನ್ವೇಷಿಸುವವರಿಗೆ ಆ ರಹಸ್ಯಗಳು ತಿಳಿಯದಂತಾಗಿರುವ ಸಮಯದಲ್ಲಿ ಮರುಭೂಮಿಯಲ್ಲಿ ಒಯಾಸಿಸ್ಸಿನ ಹಾಗೆ ಲಭಿಸುವ ಅಪರೂಪವಾದ ಆಧ್ಯಾತ್ಮಿಕ ಗ್ರಂಥವೇ **"ದೇವಾಲಯ ರಹಸ್ಯಗಳು."**

ಈ ಗ್ರಂಥದಲ್ಲಿ ದೇವಾಲಯ ಗೋಪುರದಿಂದ ಹಿಡಿದು ಗರ್ಭಗುಡಿಯಲ್ಲಿ ಸಾಕಾರ ಪ್ರತಿಮೆವರೆಗೂ, ಮತ್ತೂ ಆ ಪ್ರತಿಮೆಗೆ ಮಾಡುವ ಪೂಜಾ ವಿಧಾನದಲ್ಲಿನ ಪ್ರತಿಯೊಂದು ಕಾರ್ಯಕ್ಕೂ ಸುಲಭ ಶೈಲಿಯಲ್ಲಿ, ಶಾಸ್ತ್ರಬದ್ಧವಾದ ವಿವರ ಕೊಡಲಾಗಿದೆ. ಇಲ್ಲಿಯವರೆಗೂ ಯಾರೂ ಬಿಚ್ಚಿ ಹೇಳಲಾರದ ಆಧ್ಯಾತ್ಮಿಕ ರಹಸ್ಯಗಳ ಗುಟ್ಟನ್ನು ಮೊಟ್ಟಮೊದಲ ಬಾರಿ ಪ್ರಬೋಧಾನಂದ ಯೋಗೀಶ್ವರರು ಪ್ರಪಂಚಕ್ಕೆ ತಿಳಿಯುವಂತೆ ಮಾಡಿದ್ದಾರೆ.

**ರಚಿತ : ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ವಾರ್ತಕನು–ವರ್ತಕನು



ದೇವರು ಪ್ರಪಂಚವನ್ನು ಸೃಷ್ಠಿಸಿದಾಗಿನಿಂದ ಇಂದಿನವರೆಗೂ ಹಿಂದಿನ ಕಾಲದಲ್ಲಿ ನಡೆದ ಘಟನೆಗಳು, ಸಂಘಟನೆಗಳು, ದುರ್ಘಟನೆಗಳು ಎಲ್ಲವನ್ನು ಸೇರಿಸಿ "ಚರಿತ್ರೆ" ಅನ್ನುತ್ತಿದ್ದೇವೆ. ಚರಿತ್ರೆಯಲ್ಲಿ ಹಲವು ಬದಲಾವಣೆಗಳು, ಕೂಡಿಕೆಗಳು ನಡೆದುಹೋಗಿವೆ. ಸೃಷ್ಠಿ ಆದಿಯಲ್ಲಿ ಹುಟ್ಟಿದ ಮಾನವರೆಲ್ಲಾ ಒಂದೇ ಸಮಾಜದಂತಿದ್ದರು. ನಂತರ ನಡೆಯುವ ಕಾಲದಲ್ಲಿ ಮನುಷ್ಯರಲ್ಲಿನ ಗುಣ ಪ್ರಭಾವದಿಂದ ಮಾನವ ಸಮಾಜದಲ್ಲಿ ಮೊದಲು ಕುಲಗಳು ಹುಟ್ಟಿವೆ. ಕೃತಯುಗದಲ್ಲಿಯೇ ಕುಲಗಳು ಹುಟ್ಟಿ ಕೃತಯುಗ, ತ್ರೇತಾಯುಗ, ದ್ವಾಪರಯುಗ ಈ ಮೂರು ಯುಗಗಳಲ್ಲಿಯೂ ಕುಲಗಳ ವೃದ್ಧಿ ನಡೆಯುತ್ತಾ ಬಂದಿದೆ. ಕೊನೆಯಲ್ಲಿ ಬಂದಿರುವ ಕಲಿಯುಗದಲ್ಲಿ ಕುಲಗಳಿಗಿಂತ ಬೇರೆಯಾಗಿರುವ ಮತ ಹುಟ್ಟಿದೆ. ಹಿಂದೆ ಕಲಿಯುಗದಲ್ಲಿ ಹುಟ್ಟಿದ ಮತವು ಕುಲಗಳಿಗಿಂತ ದೊಡ್ಡದಾಗಿದೆ. ಕೃತಯುಗದಲ್ಲಿ ಹುಟ್ಟಿದ ಕುಲವೇ ಮನುಷ್ಯರನ್ನು ಬೇರೆ ಬೇರೆ ವರ್ಗಗಳಾಗಿ ವಿಭಜಿಸುವಂತೆ ಮಾಡಿ, ಮನುಷ್ಯನನ್ನು ಜ್ಞಾನದಿಂದ ಅಜ್ಞಾನದ ಕಡೆಗೆ ಕಳುಹಿಸಿದೆ. ಕುಲ ವ್ಯವಸ್ಥೆಯೇ ಮನುಷ್ಯನನ್ನು ಅಜ್ಞಾನದ ಕಡೆಗೆ ಕಳುಹಿಸಿ ಇದು ನನ್ನ ಕುಲ, ಅದು ನಿನ್ನ ಕುಲ ಎನ್ನುವ ವ್ಯತ್ಯಾಸಗಳನ್ನು ಏರ್ಪಡಿಸಿ, ದೇವರು ಹುಟ್ಟಿಸಿದ ಒಂದೇ ಮಾನವ ಜಾತಿಯನ್ನು ಅನೇಕ ವರ್ಗಗಳನ್ನಾಗಿ ಮಾಡಿದೆ. ಮತದೊಂದಿಗೆ ಹೋಲಿಸಿದರೆ ಕುಲ ಬಹಳ ಚಿಕ್ಕದು. ಒಂದು ಮತದಲ್ಲಿ ಹಲವು ಕುಲಗಳಿವೆ. ಕಲಿಯುಗದಲ್ಲಿ ಭಾರತದೇಶದಲ್ಲಿ ಇರುವ ಪ್ರಜೆಗಳಿಗೆ ಮತ ಎನ್ನುವುದು ಅಂಟಿಸಲಾಗಿದೆ. ಅದಕ್ಕೂ ಮೊದಲು ಮೂರು ಯುಗಗಳಲ್ಲಿ ಭಾರತದೇಶದ ಪ್ರಜೆಗಳಿಗೆ **"ಇಂದೂಗಳು"** ಎನ್ನುವ ಬಿರುದು ಇತ್ತು. ಇಂದೂಗಳು ಎಂದರೆ ಜ್ಞಾನಿಗಳು ಎಂದು ಅರ್ಥ. ಜ್ಞಾನಿಗಳೆಂದು ಇತರ ದೇಶದವರಿಂದ ಕರೆಯಲ್ಪಡುವ ಭಾರತೀಯರನ್ನು ಪ್ರತ್ಯೇಕಿಸಿ ಇಂದೂಗಳು ಅನ್ನುತ್ತಿದ್ದರು. ಇಂದೂಗಳು ಎನ್ನುವುದು ಆ ಸಮಯದಲ್ಲಿ ಮತವಾಗಿ ಹೇಳಲ್ಪಡಲಿಲ್ಲ. ಇಂದೂಗಳು ಜ್ಞಾನಿಗಳು ಎನ್ನುವ ಅರ್ಥಬರುವಹಾಗೆ ಭಾರತದೇಶದಲ್ಲಿದ್ದ ಜ್ಞಾನಿಗಳನ್ನನುಸರಿಸಿ ಭಾರತದೇಶವನ್ನು ಇಂದೂ ದೇಶವಾಗಿ ಕರೆದಿದ್ದಾರೆ. "ಇಂದೂದೇಶ" ಎಂದರೆ "ಜ್ಞಾನದೇಶ" ಎಂದು ಅರ್ಥ.

ಕೃತಯುಗದಲ್ಲಿ ಭಾರತದೇಶದಲ್ಲಿನ ಮನುಷ್ಯರೆಲ್ಲಾ ಇಂದೂಗಳಾಗಿದ್ದರೂ, ನಂತರ ನಡೆದ ಕಾಲದಲ್ಲಿ ಮನುಷ್ಯರಲ್ಲಿನ ಗುಣ ಪ್ರಭಾವದಿಂದ ಅವರಲ್ಲಿನ ಜ್ಞಾನ ಕ್ಷೀಣಿಸುತ್ತಾ ಬಂದು, ಒಂದೇ ಜಾತಿಯಾಗಿರುವ ಇಂದೂಗಳು ಕುಲಗಳ ರೂಪದಲ್ಲಿ ಸೀಳಿಹೋಗುತ್ತಾ ಬಂದಿದ್ದಾರೆ. ಹಾಗೆ ಮೊದಲು ಪ್ರಾರಂಭವಾದ ಕುಲ ವ್ಯವಸ್ಥೆ ಎನ್ನುವ ಗಿಡ ಕೊನೆಗೆ ಬೆಳೆಯುತ್ತಾ ಹೋಗಿ ದೊಡ್ಡ ವೃಕ್ಷದಂತೆ ತಯಾರಾಗಿದೆ. ಕುಲ ಎನ್ನುವ ಹೆಸರಿಲ್ಲದ ಇಂದೂಗಳಲ್ಲಿ ಕುಲ ಎನ್ನುವ ಗಿಡ ಹೇಗೆ ಮೊಳಕೆ ಬಂದಿದೆಯೋ ಗತ ಚರಿತ್ರೆಯೊಳಗೆ ಇಣುಕಿ (ಬಗ್ಗಿ) ನೋಡಿದರೆ ಹೀಗೆ ತಿಳಿಯುತ್ತಿದೆ. ಸೂರ್ಯನು ಆಕಾಶದಿಂದ ಇಳಿದು ಬಂದು ಮನುವಿಗೆ ಜ್ಞಾನವನ್ನು ತಿಳಿಸಿದಾಗ, ಮನುವು ಇಕ್ಷ್ವಾಕನೆಂಬ ಸೂರ್ಯ ವಂಶ ರಾಜನಿಗೆ ತಿಳಿಸಿದನು. ಇಕ್ಷ್ವಾಕನೆಂಬ ರಾಜನಿಂದ ನಂತರ ರಾಜರು, ಋಷಿಗಳು ತಿಳಿದುಕೊಂಡರು. ಕೊನೆಗೆ ಅವರಿಂದ ಪ್ರಜೆಗಳೆಲ್ಲರಿಗೂ ದೈವಜ್ಞಾನ ತಿಳಿದುಹೋಗಿದೆ. ಸೂರ್ಯನು ಭೂಮಿ ಮೇಲೆ ಜ್ಞಾನವನ್ನು ಹೇಳಿದಾಗ ಒಂದೇ ಮಾನವ ಸಮಾಜವಿತ್ತು. ಆಗ ಅವರಲ್ಲಿ ಯಾವ ರೀತಿ ಹೆಚ್ಚು ಕಡಿಮೆಗಳು ಇರಲಿಲ್ಲ. ಸಮಸಮಾಜವಾಗಿದ್ದ ಆದಿನದ ಪ್ರಜೆಗಳಿಗೆ ಯಾವಾಗಾದರೆ ಜ್ಞಾನ ತಿಳಿಯಿತೋ, ಆಗಲೇ ಅವರಲ್ಲಿ ಸ್ವಲ್ಪ ಮಾಯೆ ಕೂಡಾ ಕೆಲಸ ಮಾಡಲು ಪ್ರಾರಂಭಿಸಿತು. ಆಕಾಶದಲ್ಲಿರುವ ಸೂರ್ಯಗ್ರಹ ಉರಿಯುತ್ತಿರುವ ಅಗ್ನಿ ಗೋಳವೆಂದು ಈದಿನ ಬಹಳ ಜನರಿಗೆ ತಿಳಿದಿದೆ. ಈ ಭೂಗೋಳಕ್ಕಿಂತಲೂ ಎಷ್ಟೋ ಲಕ್ಷಪಟ್ಟು ದೊಡ್ಡದಾದ ಸೂರ್ಯಗೋಳದಲ್ಲಿಯೂ ಒಬ್ಬ ಜೀವನಿದ್ದಾನೆ. ಸೂರ್ಯಗೋಳದಲ್ಲಿನ ಜೀವಿಯು ಸೂಕ್ಷ್ಮರೂಪದಿಂದ ಭೂಮಿ ಮೇಲೆಗೆ ಬಂದು, ತಾನು ಆಕಾಶದಲ್ಲಿ ವಾಣಿ ಮೂಲಕ ಕೇಳಿದ ಜ್ಞಾನವನ್ನು ಭೂಮಿ ಮೇಲೆ ಇರುವ ಮನುವು ಎಂಬ ಒಬ್ಬ ವ್ಯಕ್ತಿಗೆ ಹೇಳುವುದು ನಡೆಯಿತು. ಯಾವಾಗಾದರೇ ಮನುವು ಜ್ಞಾನವನ್ನು ಸೂರ್ಯನಿಂದ ತಿಳಿದಿದ್ದಾನೋ, ಆಗಲೇ ಮನುವು ಎಂಬ ವ್ಯಕ್ತಿಯಲ್ಲಿ ಸ್ವಲ್ಪ ಮಾಯೆ ಕೆಲಸ ಮಾಡಿದೆ. ಅದು ಮಾಯೆ ಎಂದು ತಿಳಿಯದಂತೆ ಮನುವು ತಲೆಯಲ್ಲಿನ ಗುಣ ಕೆಲಸ ಮಾಡಿ, ಸೂರ್ಯನು ತನಗೆ ಜ್ಞಾನವನ್ನು ಹೇಳಿರುವುದಕ್ಕೂ, ತನ್ನ ತಲೆಯಲ್ಲಿ ಸೂರ್ಯನ

ಜ್ಞಾನ ಸಂಗ್ರಹಣೆಯಿರುವುದರಿಂದ, ತನ್ನ ಮುಖದ ಮೇಲೆ ಹಣೆಯ ಭಾಗದಲ್ಲಿ ಸೂರ್ಯನ ಗುರುತನ್ನು ಇಟ್ಟುಕೊಳ್ಳುವುದು ನಡೆಯಿತು.

ಸೂರ್ಯನು ಹೇಳಿರುವ ಜ್ಞಾನ ತನ್ನಲ್ಲಿ ಇರುವಹಾಗೆ ತಿಳಿಸುವುದೇ ಅಲ್ಲದೇ, ಸೂರ್ಯನು ತನಗೆ ಜ್ಞಾನವನ್ನು ಹೇಳಿರುವುದಕ್ಕೆ ಆತನ ಮೇಲೆ ಗೌರವದಿಂದ, **"ಒಳ್ಳೆಯದನ್ನು ಮಾಡಿದವನನ್ನು ಮರೆಯಬಾರದೆನ್ನುವ"** ಭಾವದಿಂದ ಮನುವು ತನ್ನ ಹಣೆಯ ಮೇಲೆ ಸೂರ್ಯನ ಆಕಾರವನ್ನು ಮುದ್ರಿಸಿಕೊಂಡಿದ್ದಾನೆ. ಮನುವು ಇಕ್ಷ್ವಾಕನೆಂಬ ರಾಜನಿಗೆ ತನಗೆ ಸೂರ್ಯನ ಮೂಲಕ ತಿಳಿದ ಜ್ಞಾನವನ್ನು ಹೇಳಿದನು. ಇಕ್ಷ್ವಾಕನು ಮನುವಿನಿಂದ ಜ್ಞಾನವನ್ನು ತಿಳಿಯುವುದರಿಂದ ಮನುವನ್ನು ಗುರುವಾಗಿ ಭಾವಿಸಿ, ಆತನ ಹಣೆಯ ಮೇಲೆ ಧರಿಸಿದ ಸೂರ್ಯನ ಗುರುತನ್ನು ಇಕ್ಷ್ವಾಕನು ಕೂಡಾ ಇಟ್ಟುಕೊಂಡನು. ಹಾಗೆ ಇಕ್ಷ್ವಾಕನು ಮೊದಲು ಸೂರ್ಯನ ಗುರುತನ್ನು ತನ್ನ ಹಣೆಯ ಮೇಲೆ ಇಟ್ಟುಕೊಂಡಾಗ, ಅಂದಿನಿಂದ ಆತನನ್ನು ಸೂರ್ಯವಂಶದ ರಾಜನಾಗಿ ಎಲ್ಲರೂ ಅಂದುಕೊಂಡಿದ್ದರು. ಮನುವಿನಿಂದ ಇಕ್ಷ್ವಾಕನಿಗೆ, ಇಕ್ಷ್ವಾಕನಿಂದ ಪರಂಪರೆಯಾಗಿ ಲೋಕವೆಲ್ಲದಕ್ಕೂ ದೈವಜ್ಞಾನ ತಿಳಿದುಹೋಯಿತು. ಆಗ ದೇವರ ಜ್ಞಾನವನ್ನು ಚೆನ್ನಾಗಿ ಜೀರ್ಣಿಸಿಕೊಂಡವರು ಉಳಿದ ಪ್ರಜೆಗಳಿಗೆ ಜ್ಞಾನವನ್ನು ಹೇಳುತ್ತಿದ್ದರು. ಜನಸಂಖ್ಯೆ ಕಡಿಮೆ ಇರುವ ಆ ಕಾಲದಲ್ಲಿ 50 ಮೈಲುಗಳಿಗೆ ಒಂದು ಊರು ಇರುತ್ತಿತ್ತು. ಒಂದು ಊರಿನಿಂದ ಮತ್ತೊಂದು ಊರಿಗೆ ಹೋಗಬೇಕೆಂದರೆ ಕುದುರೆಗಳ ಮೇಲೆ, ಎತ್ತಿನ ಗಾಡಿಗಳಮೇಲೆ ಹೋಗುತ್ತಿದ್ದರು. ಅವು ಯಾವೂ ಇಲ್ಲದವರು ಕಾಲ್ನಡಿಗೆಯಲ್ಲಿ ಪ್ರಯಾಣಿಸುತ್ತಿದ್ದರು. ಇಂದಿನಹಾಗೆ ಆಗ ವಾಹನಗಳ ಸೌಕರ್ಯಗಳು ಇಲ್ಲ. ಆದ್ದರಿಂದ ಯಾವ ಊರಲ್ಲಿರುವವರು ಆ ಊರಿನಲ್ಲಿ ಇತರರಿಗೆ ಜ್ಞಾನವನ್ನು ಹೇಳುತ್ತಿದ್ದರು. ಜ್ಞಾನವನ್ನು ಚೆನ್ನಾಗಿ ಅರ್ಥ ಮಾಡಿಕೊಂಡವರು ಆ ಊರಲ್ಲಿ ಜ್ಞಾನ ತಿಳಿಯದ ಪ್ರಜೆಗಳಿಗೆ ತಮಗೆ ತಿಳಿದ ಜ್ಞಾನವನ್ನು ಹೇಳುತ್ತಿದ್ದರು. ಈ ವಿಧವಾಗಿ ಒಂದು ಊರಿನಲ್ಲಿ ಹತ್ತು ಮಂದಿ ಜ್ಞಾನವನ್ನು ಹೇಳುವವರಿದ್ದರೆ

ಸಾವಿರ ಮಂದಿ ಜ್ಞಾನವನ್ನು ಕೇಳುವವರಿದ್ದರು. ಇಕ್ಷ್ವಾಕನು ಎನ್ನುವ ರಾಜನಿಂದ ಜ್ಞಾನವನ್ನು ತಿಳಿಯುವುದರಿಂದ, ಊರಿನಲ್ಲಿ ಜ್ಞಾನವನ್ನು ಹೇಳುವ ಹತ್ತು ಜನ ಇಕ್ಷ್ವಾಕನನ್ನು ತಮ್ಮ ಗುರುವಾಗಿ ಹೇಳಿಕೊಳ್ಳುತ್ತಿದ್ದರು. ಹಾಗೆ ಸ್ವಲ್ಪ ಕಾಲ ಕಳೆದಾಗ ಜ್ಞಾನವನ್ನು ಹೇಳುವವರು, ಜ್ಞಾನವನ್ನು ಕೇಳುವವರು ಎನ್ನುವ ಎರಡು ವಿಧಗಳಾಗಿ ಊರಿನಲ್ಲಿನ ಪ್ರಜೆಗಳು ವಿಭಜಿಸಲ್ಪಟ್ಟು ಜ್ಞಾನ ತಿಳಿಯುವ ಪ್ರಜೆಗಳು, ಜ್ಞಾನವನ್ನು ತಿಳಿಸುವವರನ್ನು ಗೌರವದಿಂದ ನೋಡುತ್ತಿದ್ದರು. ಇನ್ನೂ ಸ್ವಲ್ಪ ಕಾಲ ಕಳೆದಾಗ ಜ್ಞಾನವನ್ನು ಹೇಳುವವರಲ್ಲಿ ಸ್ವಲ್ಪ ಅಭಿಪ್ರಾಯ ಭೇದಗಳು ಏರ್ಪಟ್ಟು ಬೋಧಿಸುವ ಹತ್ತು ಜನರಲ್ಲಿ ಐದು ಮಂದಿ ಒಂದು ಕಡೆ, ಮತ್ತೊಂದು ಐದು ಮಂದಿ ಮತ್ತೊಂದು ಕಡೆ ಸೀಳಿಹೋಗಿ ಎರಡು ಗುಂಪುಗಳಾಗಿ ಏರ್ಪಟ್ಟರು. ಈ ವಿಧವಾಗಿ ಎರಡು ಗುಂಪುಗಳಾಗಿ ತಯಾರಾದ ಬೋಧಕರಲ್ಲಿ ಒಂದು ಗುಂಪಿನವರು ನಾವು ಸೂರ್ಯವಂಶದವರೆಂದು ಹೇಳಿಕೊಳ್ಳುತ್ತಾ, ಮೂರು ನಿಲುವು ನಾಮಗಳನ್ನು ಇಟ್ಟುಕೊಂಡಾಗ, ಉಳಿದ ಐದು ಮಂದಿ ಗುಂಪಾಗಿರುವವರು ನಾವು ಚಂದ್ರ ವಂಶದವರೆಂದು ಹೇಳುತ್ತಾ, ಅಡ್ಡವಾಗಿರುವ ವಿಭೂತಿ ರೇಖೆಗಳನ್ನು ಇಟ್ಟುಕೊಳ್ಳುವುದು ನಡೆದಿದೆ. ಸೂರ್ಯವಂಶದವರು ಸೂರ್ಯನ ಗೊಂಬೆಯನ್ನು ಹಣೆಯ ಭಾಗದಲ್ಲಿ ಇಟ್ಟುಕೊಳ್ಳುವುದು ಕಷ್ಟವಾಗಿರುವುದರಿಂದ ಸೂರ್ಯನಿಗೆ ಬದುಲು ನಿಲುವು ನಾಮಗಳನ್ನು ಇಟ್ಟುಕೊಂಡು ನಾವು ಸೂರ್ಯ ವಂಶದವರೆಂದು ಹೇಳಿದರು. ಹಾಗೇ ಅವರಿಗೆ ವಿರುದ್ಧ ಗುಂಪಿನವರು ನಾವು ಚಂದ್ರವಂಶದವರೆಂದು ಹೇಳಿಕೊಳ್ಳುತ್ತಾ ಅವರು ಚಂದ್ರನಿಗೆ ಬದುಲು ಅಡ್ಡ ನಾಮಗಳಾದ ವಿಭೂತಿ ರೇಖೆಗಳನ್ನು ಧರಿಸಿದ್ದಾರೆ. ಹೀಗೆ ಸ್ವಲ್ಪ ಮಾಯಾ ಪ್ರಭಾವದಿಂದ ಬೋಧಕರಲ್ಲಿಯೂ ಸಹ ಸೂರ್ಯ, ಚಂದ್ರ ವಂಶಗಳೆಂದು ಎರಡು ವರ್ಗಗಳು ಏರ್ಪಟ್ಟವು.

ಮೊದಲು ಕುಲವಿಲ್ಲದ ಕೃತಯುಗದಲ್ಲಿ ಸೂರ್ಯವಂಶವೆಂದು, ಚಂದ್ರವಂಶವೆಂದು ಎರಡು ವಿಧಗಳ ಗುಂಪುಗಳು ತಯಾರಾಗಿವೆ. ಎರಡು ಗುಂಪುಗಳಾಗಿರುವ ಜ್ಞಾನ ಬೊಧಕರು ಸೂರ್ಯನು, ಮನುವು, ಇಕ್ಷ್ವಾಕನು

ಎನ್ನುವವರಿಂದ ಬಂದಿರುವ ಜ್ಞಾನವನ್ನು ಒಬ್ಬರಿಗಿಂತ ಮತ್ತೊಬ್ಬರು ಕಡಿಮೆ ಇಲ್ಲದಂತೆ ಬೋಧಿಸುತ್ತಿದ್ದರು. ಕೇಳುವ ಪ್ರಜೆಗಳು ಕೂಡಾ ಶ್ರದ್ಧೆಯಿಂದ ಕೇಳುತ್ತಾ ಜ್ಞಾನವನ್ನು ಚೆನ್ನಾಗಿ ಗ್ರಹಿಸಿಕೊಳ್ಳುತ್ತಿದ್ದರು. ಆದರೇ ಕೇಳುವ ಪ್ರಜೆಗಳಿಗೆ ಜ್ಞಾನ ತಿಳಿಯುವುದಕ್ಕೆ ದಿನದಲ್ಲಿ ಸಮಯ ಕಡಿಮೆ ಬರುತ್ತಿತ್ತು. ಒಂದು ದಿನದಲ್ಲಿ ಕೆಲಸಗಳೆಲ್ಲವೂ ಮಾಡಿಕೊಂಡರೆ ಆ ಕೆಲಸಗಳಿಗೇ ಸಮಯ ಸರಿಹೋಗುತ್ತಿತ್ತು. ಆ ಕಾಲದಲ್ಲಿ ತಿನ್ನುವುದಕ್ಕಾಗಿ ಅಡಿಗೆ ಸಾಮಾನುಗಳು ಬೇಕೆಂದರೆ ಐವತ್ತರಿಂದ ನೂರು ಮೈಲುಗಳು (80 ರಿಂದ 160 ಕಿಲೋಮೀಟರ್‌ಗಳ) ದೂರದಲ್ಲಿರುವ ಪಟ್ಟಣಗಳಿಗೆ ಹೋಗಿ ರೈತರ ಹತ್ತಿರ ಬೆಳೆದ ಧಾನ್ಯ ಒಂದು ಕಡೆ, ಹುಣಸೆಮರಗಳನ್ನು ಬೆಳೆಸಿದ ರೈತನ ಹತ್ತಿರಕ್ಕೆ ಹೋಗಿ ಹುಣಿಸೆಹಣ್ಣನ್ನು ಮತ್ತೊಂದು ಕಡೆ ಕೊಳ್ಳುತ್ತಿದ್ದರು. ಉಪ್ಪು ಬೇಕಾದರೇ ಸಮುದ್ರ ತೀರ ಪ್ರಾಂತಗಳಲ್ಲಿ ಉಪ್ಪು ತಯಾರೀ ಮಾಡುವವರಹತ್ತಿರದಿಂದ ಉಪ್ಪು ತಂದುಕೊಳ್ಳುತ್ತಿದ್ದರು. ಈ ವಿಧವಾಗಿ ಅನೇಕ ಕಡೆಗೆ ಹೋಗಿ ಅವರಿಗೆ ಬೇಕಾದ ಸಾಮಾನುಗಳು, ವಸ್ತುಗಳನ್ನು ತಂದುಕೊಳ್ಳುತ್ತಿದ್ದರು. ಆಗಿನ ಕಾಲದಲ್ಲಿ ಪಾತ್ರೆಗಳೆಲ್ಲವೂ ಮಣ್ಣಿನಿಂದ ಮಾಡಿರುವವೇ ಬಳಸುತ್ತಿದ್ದರು. ಅಡಿಗೆ ಬೇಯಿಸಿಕೊಳ್ಳುವುದಕ್ಕೂ, ನೀರು ತಂದುಕೊಳ್ಳುವುದಕ್ಕೂ ಮಣ್ಣಿನ ಪಾತ್ರೆಗಳನ್ನೇ ಉಪಯೋಗಿಸುತ್ತಿದ್ದರು. ಪ್ರತಿ ಊರಿನಲ್ಲೂ ಮಣ್ಣಿನ ಪಾತ್ರೆಗಳನ್ನು ಮಾಡುವ ಕುಂಬಾರರು ಇರುವುದರಿಂದ ಚಿಕ್ಕ ಮಣ್ಣಿನ ಪಾತ್ರೆ, ಮೂಕಟಿ, ಚಿಕ್ಕ ಕೊಡದಿಂದ ದೊಡ್ಡ ಬಾನೆಗಳವರೆಗು ಮಣ್ಣಿನಿಂದ ಮಾಡಿರುವವು ಊರಲ್ಲೇ ಸಿಗುತ್ತಿದ್ದವು. ಹಾಗೇ ಊರಲ್ಲಿನ ಕಮ್ಮಾರ ಕುಲದವರು, ಕ್ಷೌರಿಕರು, ಅಗಸರು ಇರುವುದರಿಂದ ಕೆಲವರು ಧಾನ್ಯವನ್ನು ಬೆಳೆಯುವ ರೈತರು ಇರುವುದರಿಂದ ಪ್ರಜೆಗಳಿಗೆ ಕೆಲವು ಅವಶ್ಯಗಳು ಈಡೇರಿದರೂ ಮತ್ತೆ ಕೆಲವು ಅವಶ್ಯಕತೆಗಳಿಗಾಗಿ ದೂರ ಪ್ರಾಂತಗಳಲ್ಲಿ ಇರುವ ಊರುಗಳಿಗೆ ಹೋಗಬೇಕಾಗಿತ್ತು. ಆದ್ದರಿಂದ ಹೆಚ್ಚಿನ ಕಾಲ ಹೊರಗಿನ ಊರುಗಳಿಗೆ ಹೋಗಿ ಬೇಕಾದ ವಸ್ತುಗಳನ್ನು, ಸಾಮಾನುಗಳನ್ನು ತಂದುಕೊಳ್ಳುವುದಕ್ಕೆ ಸರಿಹೋಗುತ್ತಿತ್ತು. ಇಂದಿನ ಹಾಗೆ ಆ ಕಾಲದಲ್ಲಿ ಬಜಾರುಗಳು, ವ್ಯಾಪಾರ ಸಂತೆಗಳು, ಕಿರಾಣಿ ಅಂಗಡಿಗಳು ಇರುತ್ತಿರಲಿಲ್ಲ. ಇಂತಹ ಸಮಸ್ಯೆಗಳಿಂದ ಹೆಚ್ಚಿನ ಕಾಲವನ್ನು

ಜ್ಞಾನವನ್ನು ತಿಳಿದುಕೊಳ್ಳುವುದಕ್ಕೆ ಪ್ರಜೆಗಳು ಉಪಯೋಗಿಸಿಕೊಳ್ಳಲಾರದೆ ಹೋಗುತ್ತಿದ್ದರು.

ಆಗಿನ ಕಾಲದಲ್ಲಿ ಪ್ರಜೆಗಳು ಹೆಚ್ಚಾಗಿ ಮೂಢನಂಬಿಕೆ ಇರುವವರಾಗಿದ್ದೂ, ಪ್ರತಿಯೊಂದನ್ನೂ ನಂಬೀನಂಬಲಾರದ ಸ್ಥಿತಿಯಲ್ಲಿದ್ದು, 'ರೋಗಗಳಿಗೆ ದೇವತೆಗಳಿಗೆ ಶಾಂತಿಗಳು ಮಾಡಿದರೇ ಚೆನ್ನಾಗಿರುತ್ತೇವೆ' ಎನ್ನುವ ಮೂಢನಂಬಿಕೆ ಇದ್ದು ಜ್ಞಾನಕ್ಕಿಂತಲೂ ದೇವತೆಗಳ ಶಾಂತಿಗಳಿಗೇ ಹೆಚ್ಚಿನ ಪ್ರಾಧಾನ್ಯತೆ ಕೊಡುತ್ತಿದ್ದರು. ಪೂರ್ತಿ ಜ್ಞಾನ ತಿಳಿಯದ ಮನುಷ್ಯರು ದಾರ ಕಿತ್ತುಹೋದ ಗಾಳಿಪಟದಂತೆ ಯಾವಕಡೆ ಗಾಳಿ ಬಂದರೆ ಆಕಡೆ ಹೋದಹಾಗೆ ಒಂದು ಸ್ಥಿರತ್ವವಿಲ್ಲದೇ ಇದ್ದರು. ಅಂತಹ ಪ್ರಜೆಗಳಿಗೆ ಜ್ಞಾನವನ್ನು ಹೇಳುವ ಬೋಧಕರು ಎರಡು ಗುಂಪುಗಳಾಗಿ ತಯಾರಾಗಿ ಸೂರ್ಯವಂಶದವರೆಂದು, ಚಂದ್ರವಂಶದವರೆಂದು ಸೀಳಿಹೋಗಿ ನಾವು ದೊಡ್ಡವರು, ನಾವು ದೊಡ್ಡವರು ಎಂದು ಪೈಪೋಟಿಯಿಂದ ಜ್ಞಾನವನ್ನು ಹೇಳುತ್ತಿದ್ದರು. ಅಷ್ಟೇ ಅಲ್ಲದೆ ತಾವು ದೊಡ್ಡವರೆಂದು ಸಾರಿಕೊಳ್ಳುವುದಕ್ಕೆ ತಮ್ಮಕಡೆಗೆ ಹೆಚ್ಚಿನ ಪ್ರಜೆಗಳನ್ನು ಆಕರ್ಷಿಸಿಕೊಳ್ಳಬೇಕೆಂದುಕೊಂಡಿದ್ದಾರೆ. ಆ ಪ್ರಯತ್ನದಲ್ಲಿ ಪ್ರಜೆಗಳ ಅವಶ್ಯಗಳನ್ನು ತಾವೇ ನೆರವೇರಿಸಿ ತಮ್ಮ ಕಡೆ ಹೆಚ್ಚಿನ ಪ್ರಜೆಗಳನ್ನು ಬರಮಾಡಿಕೊಳ್ಳಬೇಕೆಂದು ಪ್ರಯತ್ನಿಸುತ್ತಿದ್ದರು. ಎರಡು ಗುಂಪುಗಳಾಗಿ ಇರುವ ಬೋಧಕರು ತಮ್ಮ ಆಧಿಪತ್ಯ(ಅಧಿಕಾರ)ವನ್ನು ತಿಳಿಸುವುದಕ್ಕೆ ಸರಿಯಾದ ರೀತಿಯಲ್ಲಿ ಪ್ರಯತ್ನಿಸಬೇಕೆಂದು ಯೋಚಿಸಿ, ಸೂರ್ಯವಂಶದ ಗುಂಪಿನವರು ಪ್ರಜೆಗಳ ಮೂಢನಂಬಿಕೆಗಳನ್ನು ಆಸರೆಯಾಗಿ ತೆಗೆದುಕೊಂಡು, ಅವರ ಅನುಮಾನಗಳಿಗೆ ತಕ್ಕಂತೆ ಒಳ್ಳೆಯ ಕೆಟ್ಟ ದಿನಗಳೆಂದೂ, ಒಳ್ಳೆಯ ಮುಹೂರ್ತಗಳೆಂದೂ, ಗ್ರಹ ಬಲವೆಂದೂ, ಜಾತಕಗಳೆಂದೂ, ಸ್ಥಾನಬಲಗಳೆಂದೂ ಹೇಳುತ್ತಾ ಅವುಗಳನ್ನು ಆಚರಿಸಿ ಕೆಲವು ಮುಹೂರ್ತಗಳಲ್ಲಿ ಕೆಲಸಗಳನ್ನು ಮಾಡಿದರೆ ಅವು ಈಡೇರುತ್ತವೆಂದು, ಅದರಿಂದ ಹೆಚ್ಚಿನ ಲಾಭಗಳು ಬರುತ್ತವೆಂದೂ ಪ್ರಜೆಗಳಿಗೆ ಹೇಳಿ ಅವರನ್ನು ತಮ್ಮ ಕಡೆಗೆ ಸೆಳೆದುಕೊಳ್ಳಲು ಪ್ರಯತ್ನಿಸಿದ್ದಾರೆ.

ಆಗ ಅವರ ಮಾತುಗಳನ್ನು ಕೇಳಿದ ಕೆಲವರು ಪ್ರಜೆಗಳು ಅವರ ಕಡೆ ಹೆಚ್ಚಾಗಿ ಹೋಗತೊಡಗಿದರು. ಅದನ್ನು ನೋಡಿದ ಚಂದ್ರವಂಶ ಎಂದು ಹೆಸರಿಟ್ಟುಕೊಂಡಿರುವ ಬೋಧಕರು ತಾವೂ ಸಹ ಪ್ರಜೆಗಳಿಗೆ ಒಳ್ಳೆಯದಾಗಿ ಕಾಣಿಸಿ ತಮ್ಮ ಕಡೆಗೆ ಬರುವಹಾಗೆ, ತಮ್ಮ ಬೋಧೆಗಳನ್ನು ಕೇಳುವಹಾಗೆ ಮಾಡಿಕೊಳ್ಳಬೇಕೆಂದು ಯೋಚಿಸಿ ಒಂದು ನಿರ್ಣಯಕ್ಕೆ ಬಂದಿದ್ದಾರೆ. ಪ್ರಜೆಗಳು ತಮಗೆ ಅವಶ್ಯವಿರುವ ವಸ್ತುಗಳಿಗಾಗಿ ದೂರ ಪ್ರಾಂತಗಳಿಗೆ ಹೋಗಿ ಶ್ರಮಪಟ್ಟು ತಂದುಕೊಳ್ಳುವುದೇ ಅಲ್ಲದೇ ಕಾಲವನ್ನು ವ್ಯರ್ಥ ಮಾಡುತ್ತಿದ್ದಾರೆಂದು ತಿಳಿದು, ಅವರಿಗೆ ಬೇಕಾದ ವಸ್ತುಗಳನ್ನೆಲ್ಲಾ ತಮ್ಮ ಹತ್ತಿರವೇ ಇಟ್ಟುಕೊಂಡರೇ ಪ್ರಜೆಗಳೆಲ್ಲರೂ ತಮ್ಮ ಹತ್ತಿರಕ್ಕೇ ಬರುವುದಕ್ಕೆ ಅವಕಾಶವಿದೆಯೆಂದು ತಿಳಿದು, ಪ್ರಜೆಗಳ ಅವಶ್ಯಗಳನ್ನು ತಾವು ನೆರವೇರಿಸಿದರೆ, ಅದಕ್ಕಾಗಿ ವಿನಿಯೋಗಿಸುವ ಕಾಲವೆಲ್ಲವೂ ಪ್ರಜೆಗಳು ತಮ್ಮ ಹತ್ತಿರವೇ ಕಳೆಯುತ್ತಾರೆಂದು ತಿಳಿದು, ಕೂಡಲೇ ಸಮಸ್ತ ವಸ್ತುಗಳು, ಸಾಮಾಗ್ರಿ ಎಲ್ಲಾ ವಿಧಗಳಲ್ಲಿ ಅವಶ್ಯವಾಗಿ ಬೇಕಾದ ಸಾಮಾಗ್ರಿಯನ್ನೆಲ್ಲಾ ಶೇಕರಿಸಿ ತಂದು ತಮ್ಮ ಹತ್ತಿರ ಇಟ್ಟುಕೊಂಡು ಪ್ರಜೆಗಳ ಅವಶ್ಯಗಳನ್ನು ನೆರವೇರಿಸುತ್ತಾ, ಅವರಿಗೆ ಸ್ವಲ್ಪ ಸಮಯ ಸಿಕ್ಕಿದಾಗ, ಆ ಸಮಯದಲ್ಲಿ ತಮ್ಮ ಹತ್ತಿರ ಜ್ಞಾನವನ್ನು ಕೇಳುವಹಾಗೆ ತಮ್ಮ ಹತ್ತಿರಕ್ಕೆ ಬರುವ ಹಾಗೆ ಮಾಡಿಕೊಂಡರು. ಆ ರೀತಿ ಚಂದ್ರವಂಶದ ಬೋಧಕರು ಕಿರಾಣಿ ಅಂಗಡಿಗಳನ್ನು ತಮ್ಮ ಹತ್ತಿರವೇ ಸ್ಥಾಪಿಸಿಕೊಂಡು, ಪ್ರಜೆಗಳ ಅವಶ್ಯಗಳ ನಿಮಿತ್ತ ದೂರ ಪ್ರಾಂತಗಳಿಗೆ ಹೋಗದಂತೆ ತಮ್ಮ ಹತ್ತಿರಕ್ಕೇ ಬರುವಹಾಗೆ ಮಾಡಿಕೊಂಡಿದ್ದಾರೆ. ಇವರಿಗಿಂತ ಮೊದಲೇ ಸೂರ್ಯವಂಶ ಬೊಧಕರು ಪ್ರಜೆಗಳಿಗೆ ಪಂಚಾಂಗಗಳನ್ನು ನೋಡಿ, ಪ್ರತಿಯೊಂದಕ್ಕೂ ಒಳ್ಳೆಯ ಕೆಟ್ಟ ದಿನಗಳನ್ನು ನಿರ್ಣಯಿಸಿ ಹೇಳುತ್ತಿದ್ದರು. ಕೊನೆಗೆ ಗಡ್ಡ ಮಾಡಿಸಿಕೊಳ್ಳುವುದಕ್ಕೂ, ತಲೆ ಸ್ನಾನ ಮಾಡುವುದಕ್ಕೂ, ಪ್ರಯಾಣಕ್ಕೂ, ಮನೆ ಕಟ್ಟುವುದಕ್ಕೂ, ಮದುವೆಗೆ, ಹೆಸರು ಇಡುವುದಕ್ಕೂ, ವಿದ್ಯಾಭ್ಯಾಸಕ್ಕೂ, ಹೊಸ ವಸ್ತ್ರಗಳನ್ನು ಧರಿಸುವುದಕ್ಕೂ, ಪ್ರಸವಕ್ಕೂ, ಗರ್ಭದಾನಕ್ಕೂ, ಹೊಲ ಊಳುವುದಕ್ಕೂ, ಬೀಜ ಬಿತ್ತುವುದಕ್ಕೂ ಎಂದು ಪ್ರತಿಯೊಂದಕ್ಕೂ ಒಳ್ಳೆಯ ಕೆಟ್ಟ ಮುಹೂರ್ತಗಳನ್ನು ನಿರ್ಣಯಿಸಿ, ಇಂತಹ ಸಮಯದಲ್ಲಿ ಮಾಡಿದರೆ

ಒಳ್ಳೆಯದೆಂದು, ಉಳಿದ ಸಮಯಗಳಲ್ಲಿ ಮಾಡಿದರೆ ಕೆಟ್ಟದು ನಡೆಯುತ್ತದೆಂದು ಹೇಳಿ ಪ್ರಜೆಗಳಿಗೆ ಒಳ್ಳೆಯದನ್ನು ಮಾಡುವವರಾಗಿ ಕಾಣಿಸುತ್ತಿದ್ದರು.

ಮೂಢನಂಬಿಕೆಗಳನ್ನು ನಂಬಿದವರು, ಪ್ರತಿ ಕೆಲಸಕ್ಕೂ ಒಳ್ಳೆಯ ದಿನವನ್ನೂ, ಒಳ್ಳೆಯ ಸಮಯವನ್ನು ಬೇಕೆನ್ನುವವರು ಬಹಳ ಮಂದಿ ಸೂರ್ಯವಂಶ ಬೋಧಕರ ಹತ್ತಿರಕ್ಕೆ ಹೋಗುತ್ತಿದ್ದರು. ಅಂತಹ ಸಮಯದಲ್ಲಿ ಪ್ರಜೆಗಳೊಂದಿಗೆ ಬೆರೆತು ಅವರಿಗೆ ಹಿತವನ್ನು ಮಾಡುವಹಾಗೆ ಕಾಣಿಸುವ ಸೂರ್ಯವಂಶ ಬೋಧಕರು ತಾವು ಊರಿನಲ್ಲಿನ ಬೋಧಕರೆಲ್ಲರಿಗೂ ಒಳ್ಳೆಯದನ್ನು ಮಾಡುವವರೆಂದು ಎಲ್ಲರಿಗೂ ತಿಳಿಯುವಹಾಗೆ, ಆ ಹೆಸರು ಶಾಶ್ವತವಾಗಿ ಇರುವಹಾಗೆ **"ಪೌರಹಿತರು"** ಎಂದು ಅವರು ತಮ್ಮನ್ನು ಹೇಳಿಕೊಂಡರು. ಆ ಹೆಸರು ಪೂರ್ತಿಯಾಗಿ ಸೇರಿಸಿ ಕೊನೆಗೆ "ಪೌರೋ ಹಿತರು" ಎಂದು ಹೇಳಿಕೊಂಡಿದ್ದಾರೆ. ಆ ರೀತಿ ಆ ದಿನದ ಬೋಧಕರಿಗೆ ಪೌರೋಹಿತರೆಂದು ಬಂದಿರುವ ಹೆಸರು ಈದಿನ ಪುರೋಹಿತರಾಗಿ ಬದಲಾಗಿಹೋಗಿದೆ. ಆದರೇ ಕೃತಯುಗದಲ್ಲಿಯೇ ಆ ಹೆಸರು ಹೇಗೆ ಬಂದಿರುವುದು, ಈ ದಿನ ಪುರೋಹಿತರಾಗಿರುವವರಿಗೂ ಬಹುಶಾ ತಿಳಿಯದೆಂದುಕೊಳ್ಳುತ್ತೇವೆ. ಏಕೆಂದರೆ ನಡೆದುಹೋದ ಮೂರು ಯುಗಗಳ ಕಾಲದಲ್ಲಿ ಎಷ್ಟೋ ಬದಲಾವಣೆಗಳು ಕೂಡಿಕೆಗಳು ಬಂದು ಬಹಳ ವಿಷಯಗಳು ತಿಳಿಯದಂತೆ ಚರಿತ್ರೆಯಲ್ಲಿ ಸೇರಿಹೋಗಿವೆ. ಪೂರ್ವದ ಕೃತಯುಗದಲ್ಲಿ ಪೌರೋಹಿತರಾಗಿ ಆರಂಭವಾದ ಅವರು ಈ ದಿನ ಪುರೋಹಿತರಾಗಿ ಕರೆಯಲಾಗುತ್ತಿದ್ದರೂ, ಆ ದಿನ ತಾವು ಸೂರ್ಯವಂಶಕ್ಕೆ ಸಂಬಂಧಿಸಿದವರಾಗಿ ಇರುತ್ತಿದ್ದೇವೆಂದೂ, ಇಕ್ಷ್ವಾಕನ ಜ್ಞಾನವನ್ನು ಹೇಳುತ್ತಿದ್ದೇವೆಂದು ಈದಿನ ಮರೆತುಹೋಗಿದ್ದಾರೆ.

ಆ ದಿನ ಜ್ಞಾನದಲ್ಲಿ ಬಂದಿರುವ ಭೇದಾಭಿಪ್ರಾಯಗಳಿಂದ ಸೀಳಿಹೋಗಿ ಸೂರ್ಯವಂಶ, ಚಂದ್ರವಂಶ ಎಂದು ಪೋಟಿಯಿಂದ ಹೇಳಿಕೊಂಡವರು ಕೊನೆಗೆ ಈದಿನ ಸೂರ್ಯ ಚಂದ್ರ ವಂಶಗಳೆನ್ನುವ ಹೆಸರುಗಳನ್ನು ಪೂರ್ತಿಯಾಗಿ

ಮರೆತುಹೋಗಿದ್ದಾರೆ. ತಾವು ಪೂರ್ವವು ಯಾವ ಹೆಸರಿಂದ ಚಲಾವಣೆ ಆಗಿರುವುದು ತಿಳಿಯದಂತಿದ್ದಾರೆ. ಆದಿನದ ಬೋಧಕರಲ್ಲಿ ಒಂದು ಗುಂಪು ಸೂರ್ಯವಂಶದವರಾಗಿ ಹೇಳಿಕೊಂಡಾಗ, ಎರಡನೆ ಗುಂಪಾಗಿ ಸೀಳಿಹೋದವರು ಆ ಹೆಸರಿಗೆ ಪೋಟಿಯಂತೆ ನಾವು ಚಂದ್ರವಂಶದವರೆಂದು ಹೇಳಿಕೊಂಡರೂ, ಮಧ್ಯದಲ್ಲಿ ಬಂದಿರುವ ಬದಲಾವಣೆಗಳಿಂದ ಆದಿನ ಜ್ಞಾನವನ್ನು ಹೇಳಿದ ಸೂರ್ಯವಂಶದವರು ನಾವು ಪುರೋಹಿತರೆಂದು ಅನ್ನುತ್ತಿದ್ದಾರೆ, ಅದು ವೃತ್ತಿ ಪ್ರಕಾರ ಬಂದಿರುವ ಹೆಸರೆಂದು ಅಂದುಕೊಂಡಿದ್ದಾರಾಗಲೀ, ಅದಕ್ಕೆ ಗತದಲ್ಲಿ ಒಂದು ಚರಿತ್ರೆ ಇದೆಯೆಂದು ತಿಳಿಯದಂತಿದ್ದಾರೆ. ಪ್ರತಿ ಕೆಲಸಕ್ಕೂ ಒಳ್ಳೆಯ ದಿನವನ್ನೂ ಕೆಟ್ಟ ದಿನವನ್ನೂ ನಿರ್ಣಯಿಸಿ, ಪ್ರಜೆಗಳಿಗೆ ಹಿತವನ್ನು ಮಾಡುವವರಾಗಿ ಕಾಣಿಸುವುದರಿಂದ ಸೂರ್ಯ ವಂಶದವರು ಮಾಡುವ ಪುರೋಹಿತಕ್ಕೆ ಸಾಟಿಯಾಗಿ ಚಂದ್ರವಂಶದವರೂ ಸಹ ಪ್ರಜೆಗಳಿಗೆ ಹಿತವನ್ನು ಮಾಡಲು ಬಯಸಿ, ಪ್ರಜೆಗಳು ಅವರ ಅವಶ್ಯಗಳಿಗಾಗಿ ಬೇಕಾಗಿರುವ ಸಾಮಾಗ್ರಿಗೋಸ್ಕರ ಹೊರಗಿನ ಊರುಗಳಿಗೆ ಪ್ರಯಾಣಿಸಿ ಹೋಗಲಾರದಂತೆ ಅವರಿಗೆ ಬೇಕಾದ ಸಾಮಾಗ್ರಿ ಎಲ್ಲವೂ ಕಡಿಮೆ ಖರ್ಚಿನಿಂದ ಅವರಿಗೆ ಲಭಿಸುವಹಾಗೆ ಮಾಡಬೇಕೆನ್ನುವ ಉದ್ದೇಶದಿಂದ ಅಂಗಡಿಗಳನ್ನು ಪ್ರಾರಂಭಿಸಿ ಪ್ರಜೆಗಳಿಗೆ ಸಾಮಾಗ್ರಿಗಳನ್ನು ಒದಗಿಸುವುದು ನಡೆದಿದೆ. ಆಗ ಪ್ರಜೆಗಳು ದೂರ ಪ್ರಯಾಣಕ್ಕೆ ವಿನಿಯೋಗಿಸುವ ಕಾಲವನ್ನು ತಮ್ಮ ಹತ್ತಿರವೇ ಕಳೆಯುವಂತೆ ಮಾಡಿ ಪ್ರಜೆಗಳಿಗೆ ಜ್ಞಾನವನ್ನು ಹೇಳುತ್ತಿದ್ದರು. ಪ್ರಜೆಗಳಿಗೆ ದೈವ ಸಂಬಂಧವಾದ ಸಮಾಚಾರವನ್ನು ಹೇಳುವವರೆಂದು ಎಲ್ಲರಿಗೂ ತಿಳಿಯುವ ಹಾಗೆ, ಆ ಹೆಸರು ಶಾಶ್ವತವಾಗಿ ಇರುವಂತೆ ಸೂರ್ಯವಂಶದವರು ತಮ್ಮನ್ನು ತಾವು ಪೌರೋಹಿತರಾಗಿ ಪ್ರಕಟಿಸಿಕೊಂಡಂತೆ, ಚಂದ್ರವಂಶದವರೂ ಸಹ ತಮಗೂ ಸಹ ಒಂದು ಪ್ರತ್ಯೇಕವಾದ ಹೆಸರನ್ನು ಇಟ್ಟುಕೊಳ್ಳಬೇಕೆಂದು ಸ್ವಲ್ಪ ಯೋಚಿಸಿ, ಕೊನೆಗೆ ಒಂದು ನಿರ್ಣಯಕ್ಕೆ ಬಂದು ಹೀಗೆ ಅಂದುಕೊಂಡಿದ್ದಾರೆ. ತಾವು ಪ್ರಜೆಗಳಿಗೆ ದೇವರ ಸಮಾಚಾರವಾದ ದೈವಜ್ಞಾನವನ್ನು ತಿಳಿಸುತ್ತಿದ್ದೇವೆ, ಆದ್ದರಿಂದ ತಾವು ದೇವರ ವಾರ್ತೆಗಳನ್ನು ತಿಳಿಸುವ ನಿಜವಾದ ಬೋಧಕರೆಂದು ನೆನಪಿರುವ

ಹಾಗೆ, ತಮ್ಮನ್ನು ಎಲ್ಲರೂ ಅದೇ ಹೆಸರಿನಿಂದ ಕರೆಯಬೇಕೆಂದುಕೊಂಡಿದ್ದಾರೆ. ಅದಕ್ಕೆ ತಕ್ಕಂತೆ ತಮ್ಮನ್ನು ತಾವು **"ವಾರ್ತಕರು"** ಎಂದು ಹೆಸರಿಟ್ಟುಕೊಂಡಿದ್ದಾರೆ. ವಾರ್ತಕರು ಎಂದರೆ ವಾರ್ತೆಗಳನ್ನು ತಿಳಿಸುವವರೆಂದು ಅರ್ಥ. ದೇವರ ಜ್ಞಾನವೇ ನಿಜವಾದ ವಾರ್ತೆಗಳಾಗಿ ಪ್ರಜೆಗಳು ಲೆಕ್ಕಿಸುತ್ತಿದ್ದರು. ಆದ್ದರಿಂದ ದೈವಜ್ಞಾನವನ್ನು ತಿಳಿಸುವ ಚಂದ್ರವಂಶ ಬೋಧಕರನ್ನು ಪ್ರಜೆಗಳು "ವಾರ್ತಕರು" ಎಂದು ಸಂಬೋಧನೆ ಮಾಡತೊಡಗಿದರು. ಆ ದಿನ ಚಂದ್ರವಂಶ ಬೋಧಕರು ವಾರ್ತಕರಾಗಿ ತಮ್ಮ ಹೆಸರನ್ನು ಶಾಶ್ವತವಾಗಿ ಇರುವಹಾಗೆ, ತಾವೇ ನಿಜವಾದ ದೈವ ವಾರ್ತೆಗಳನ್ನು ತಿಳಿಸುವವರೆಂದು ವಾರ್ತಕರೆಂದು ಹೇಳಿಕೊಂಡರೆ, ಈ ದಿನ ಆ ಹೆಸರು ವರ್ತಕರಾಗಿ ಸಮಾಜದಲ್ಲಿ ಉಳಿದುಕೊಂಡಿದೆ. ಅಂಗಡಿ ವ್ಯಾಪಾರ ಮಾಡುವವರನ್ನು ವರ್ತಕರು ಎನ್ನುತ್ತಿದ್ದಾರಾಗಲೀ, ಈ ಅಂಗಡಿಗೂ ಆ ವರ್ತಕನಿಗೂ ಸಂಬಂಧ ಏನೂ ಎಂದು ಯಾರೂ ಆಲೋಚಿಸಲಿಲ್ಲ. ಈ ದಿನ ವರ್ತಕರೆಂದು ಕರೆಯಲಾಗುವವರು ತಾವು ಪೂರ್ವದಲ್ಲಿ ಚಂದ್ರ ವಂಶ ಎನ್ನುವ ಹೆಸರಿನಿಂದ ಚಲಾವಣಿ ಆಗುತ್ತಾ, ದೇವರ ಜ್ಞಾನವನ್ನು ಪ್ರಜೆಗಳಿಗೆ ಹೇಳುತ್ತಿರುವವರೆಂದು ತಿಳಿಯದೆ, ತಮ್ಮ ಪೂರ್ವಿಕರ ಚರಿತ್ರೆಗಳನ್ನು ಪೂರ್ತಿ ತಿಳಿಯದವರಾಗಿ ತಮ್ಮ ಹೆಸರನ್ನು ತಾವು ಮರೆತವರಾಗಿ, ತಮ್ಮ ಹೆಸರು ವರ್ತಕನು ಅಲ್ಲ ವಾರ್ತಕನಾಗಿ ಇರುತಿತ್ತೆಂದು ತಿಳಿಯದೆ, ಅವರೂ ಸಹ ತಮ್ಮನ್ನು ವರ್ತಕರೆಂದೇ ಹೇಳಿಕೊಳ್ಳುತ್ತಿದ್ದಾರೆ. ವರ್ತಕರೆನ್ನುವ ಹೆಸರು ಪೂರ್ವದಲ್ಲಿ ವಾರ್ತಕರಾಗಿ ಇತ್ತೆಂದು, ವಾರ್ತಕರಾಗಿ ಇರುವವರೇ ಚಂದ್ರವಂಶ ದವರಾಗಿ ಕರೆಯಲ್ಪಡುತ್ತಿದ್ದಾರೆಂದು ತಿಳಿಯದೇ ಹೋಗಿರುವುದರಿಂದ ಚಂದ್ರವಂಶದವರು ಯಾರೋ ಹೇಳಲಾರದ ಸ್ಥಿತಿಯಲ್ಲಿ ವರ್ತಕರು, ಸೂರ್ಯ ವಂಶದವರು ಯಾರೋ ತಿಳಿಯದ ಸ್ಥಿತಿಯಲ್ಲಿ ಪುರೋಹಿತರು ಉಳಿದುಕೊಂಡಿದ್ದಾರೆ. ಕೊನೆಗೆ ಸೂರ್ಯವಂಶ ಚಂದ್ರವಂಶ ತಾವು ಇಟ್ಟುಕೊಂಡ ಹೆಸರುಗಳೆಂದು, ಅವು ತಮ್ಮಿಂದಲೇ ಪ್ರಾರಂಭವಾಗಿವೆ ಎಂದು ತಿಳಿಯದೇ, ಆ ಎರಡು ಹೆಸರುಗಳನ್ನು ಪೂರ್ವದ ರಾಜರಿಗೆ ಅಂಟಿಸುತ್ತಿದ್ದಾರೆ. ಇಂಥವರು ಸೂರ್ಯವಂಶದ ರಾಜರೆಂದು, ಇಂಥವರು ಚಂದ್ರವಂಶ ರಾಜರೆಂದು ಕಟ್ಟು

ಕಥೆಗಳನ್ನು ಎಣೆಯುತ್ತಿದ್ದಾರೆ. ಆದಿಯಲ್ಲಿ ಸೂರ್ಯನು ಜ್ಞಾನವನ್ನು ಹೇಳಿರುವುದರಿಂದ ಆತನ ಹೆಸರನ್ನು ಪ್ರಜೆಗಳು ಮರೆಯಬಾರದೆಂದು ಮನುವು, ಇಕ್ಷ್ವಾಕನು ಸೂರ್ಯನ ಗುರುತನ್ನು ತಮ್ಮ ಮುಖದ ಮೇಲೆ ಇಟ್ಟುಕೊಂಡರೆ ಕೊನೆಗೆ ಸೂರ್ಯನಿಗೆ ಪೋಟಿಯಾಗಿ ಚಂದ್ರವಂಶ ತಯಾರಾಗಿ ಅದನ್ನು ಧರಿಸುವವರು ತಯಾರಾಗಿದ್ದಾರೆಂದು, ಇದೆಲ್ಲವೂ ದೈವಜ್ಞಾನದ ಹತ್ತಿರ ನಡೆದ ಅಭಿಪ್ರಾಯಬೇಧಗಳಿಂದ ಬಂದಿರುವ ಬದಲಾವಣೆಗಳೆಂದು ಈ ದಿನ ಪುರೋಹಿತರೆನ್ನುವವರಾಗಲೀ, ವರ್ತಕರೆನ್ನುವವರಾಗಲೀ ಅಂದುಕೊಳ್ಳುತ್ತಿಲ್ಲ.

ಈ ದಿನ ಪುರೋಹಿತರೆಂದು ಒಂದು ವರ್ಗದವರು, ವರ್ತಕರೆಂದು ಮತ್ತೊಂದು ವರ್ಗದವರು ಹೇಳಲಾಗುತ್ತಿದ್ದರೂ ಅವರಿಗೆ ಆ ಹೆಸರುಗಳು ಹೇಗೆ ಅನ್ವಯಿಸಿವೆಯೋ ಅವರಿಗೇ ತಿಳಿಯದಂತೆ ಹೋಗಿದೆ. ತಾವು ಮೊದಲು ದೈವಜ್ಞಾನವನ್ನು ಬೋಧಿಸುವ ಬೋಧಕರಾಗಿ ಇರುತ್ತಿದ್ದೇವೆಂಬ ವಿಷಯವನ್ನು ಅವರು ಪೂರ್ತಿ ತಿಳಿಯದಂತೆ ಹೋಗಿದ್ದಾರೆ. ಕಾಲಗರ್ಭದಲ್ಲಿ ಬದುಕಿದವರು ಹೋಗುತ್ತಾ, ಇಲ್ಲದವರು ಬರುತ್ತಿರುವುದರಿಂದ ನಡೆದ ಚರಿತ್ರೆ ತಿಳಿಯದಂತೆ ಹೋಗಿರುವ ಮಾತು ವಾಸ್ತವವೇ ಆದರೂ, ಈದಿನ ಪೂರ್ವವಿರುವ ತಮ್ಮ ಚರಿತ್ರೆಗೆ ಗುರುತುಗಳಾಗಿ ಇರುವ ಹೆಸರುಗಳು ಇಂದಿಗೂ ಸ್ವಲ್ಪ ಬದಲಾವಣೆ ಗಳಿಂದ  ಉಳಿದಿವೆ. ಆ ಉಳಿದಿರುವ ತಮ್ಮ ಗುರುತುಗಳನ್ನು ಸ್ವಲ್ಪ ಶೋಧಿಸಿದರೆ ಸುಲಭವಾಗಿ ಅವರಿಗೆ ಸ್ವಲ್ಪ ಸಮಾಚಾರ ತಿಳಿಯುವುದಕ್ಕೆ ಅವಕಾಶವಿದ್ದರೂ ಈ ದಿನ ಪ್ರಪಂಚ ವಿಷಯಗಳಲ್ಲಿ ಮುಳುಗಿಹೋದ ಸೂರ್ಯ ಚಂದ್ರ ವಂಶದವರಾದ ಪೌರಹಿತರು, ವಾರ್ತಕರು ತಮ್ಮ ಕೆಲಸಗಳಲ್ಲಿ ನಿಮಗ್ನವಾಗಿದ್ದಾರೆ ಹೊರತು, ಹಿಂದಿನ ಚರಿತ್ರೆಯನ್ನು ತೆರೆದು ನೋಡಲಾರದೆ ಹೋಗುತ್ತಿದ್ದಾರೆ. ಆದಿನ ಸಾವಿರ ಜನ ಪ್ರಜೆಗಳಿಗೆ ಹತ್ತು ಜನ ಜ್ಞಾನವನ್ನು ಹೇಳುವವರು ತಯಾರಾದರೂ, ಅವರಲ್ಲೇ ಮಾಯಾ ಪ್ರಭಾವದಿಂದ ಎರಡು ಸೀಳಿಕೆಗಳು ಏರ್ಪಟ್ಟು ಸೂರ್ಯ ಚಂದ್ರ ಎಂದು ಕಾಣಿಸುವ ಗ್ರಹಗಳ ಹೆಸರಿನಿಂದ ಅವರು ಕರೆಯಲ್ಪಟ್ಟವರಾಗಿ, ಪ್ರಜೆಗಳಲ್ಲಿ ಉತ್ತಮರಾಗಿ, ಪ್ರಜೆಗಳಲ್ಲಿ ದೊಡ್ಡ ಜ್ಞಾನಿಗಳಾಗಿ,

ಪ್ರಜೆಗಳಲ್ಲಿ ದೊಡ್ಡ ಮೇಧಾವಿಗಳಾಗಿ ಚಲಾವಣೆ ಆದವರು ಈ ದಿನ ಭೂಮಿ ಮೇಲೆ ನಮ್ಮ ಪ್ರಾಂತದಲ್ಲಿ ನಮಗೆ ತಿಳಿಯುವ ಅಗ್ರಕುಲಗಳಾದ ಬ್ರಾಹ್ಮಣ, ವೈಶ್ಯ ಕುಲಗಳಾಗಿ ಹೇಳಲಾಗುತ್ತಿದ್ದಾರೆ. ಆ ದಿನ ಎಲ್ಲರಿಗಿಂತ ಮೇಧಾವಿ ಗಳಾಗಿರುವ ಆ ಎರಡು ವರ್ಗಗಳು, ಈ ದಿನ ಭೂಮಿ ಮೇಲೆ ಎರಡು ಕುಲಗಳಾಗಿ ಬದಲಾಗಿವೆಯೆಂದು ತಿಳಿಯುತ್ತಿದೆ. ಆದಿನ ಅವರ ಹತ್ತಿರ ಜ್ಞಾನವನ್ನು ಕೇಳಿದ ಉಳಿದ ಪ್ರಜೆಗಳೆಲ್ಲರೂ ಈ ದಿನ ಇರುವ ಬ್ರಾಹ್ಮಣ, ವೈಶ್ಯ ಕುಲಗಳಿಗೆ ಕಡಿಮೆಯಾಗಿ ರುವುದು ಆ ದಿನದ ಚರಿತ್ರೆಗೆ ಗುರುತಾಗಿ ಇದೆ. ಈ ದಿನ ಬ್ರಾಹ್ಮಣರಾಗಿರುವವರು ತಮ್ಮ ಪೂರ್ವ ಚರಿತ್ರೆ ಈ ವಿಧವಾಗಿದೆಯೆಂದು ತಿಳಿಯಲಾರದೆ ಹೋಗಿದ್ದಾರೆ. ಹಾಗೆ ವೈಶ್ಯರು ಅಥವಾ ಕೋಮಟಿ ಎಂದು ಕರೆಯಲಾಗುವವರು ಪೂರ್ವದ ತಮ್ಮ ಚರಿತ್ರೆಯನ್ನು ಪೂರ್ತಿಯಾಗಿ ಮರೆತುಹೋದವರಾಗಿ ವರ್ತಕರೆಂದೋ, ಕೋಮಟಿಯವರೆಂದೋ ಅಂದುಕೊಳ್ಳುತ್ತಿದ್ದಾರೆ. ಪೂರ್ವದಲ್ಲಿ ಸೂರ್ಯ ಚಂದ್ರ ವಂಶದವರು ಇಬ್ಬರೂ ಬಹಳ ಬುದ್ಧಿವಂತರೆಂದು, ಆದ್ದರಿಂದಲೇ ಅವರು ದೈವಜ್ಞಾನವನ್ನು ಜನರಿಗೆ ಹೇಳಿದ್ದಾರೆಂದು ನಾವು ಹೇಳಿಕೊಂಡಿದ್ದೇವೆ. ಸೂರ್ಯಚಂದ್ರವಂಶದವರು ಆದಿನ ಬಹಳ ಬುದ್ಧಿವಂತರು ಅನ್ನುವುದಕ್ಕೆ ಗುರುತಾಗಿ ಈ ದಿನ ಅವರು ಬ್ರಾಹ್ಮಣ, ವೈಶ್ಯ (ಕೋಮಟಿ) ಎನ್ನುವ ಕುಲಗಳ ಹೆಸರುಗಳಿಂದ ಕರೆಯಲಾಗುತ್ತಿದ್ದರೂ, ಅವರ ವಂಶ ಪಾರಂಪರ್ಯ ಜೀನ್ಸ್ ಅವರಲ್ಲಿ ಬಂದಾಗ, ಇಂದಿಗೂ ಆ ಎರಡು ಕುಲದವರು ಬುದ್ಧಿಯಲ್ಲಿ ಗದ್ದೆಯನ್ನೇರಿದವರಾಗಿ, ಪ್ರತಿಭೆಯಲ್ಲಿ ಪ್ರಕಾಶವಂತರಾಗಿ ಎಲ್ಲರಿಂದ ಆ ಎರಡು ಕುಲದವರು ಬುದ್ಧಿವಂತರೆಂದು ಅನಿಸಿಕೊಳ್ಳುತ್ತಿದ್ದಾರೆ.

ಈದಿನ ಬ್ರಾಹ್ಮಣರು ತಮ್ಮ ಚರಿತ್ರೆಯನ್ನು ತಾವು ಮರೆತು ಹೋಗಿರುವವರಾದರೂ, ಪ್ರಜೆಗಳು ಮಾತ್ರ ದೊಡ್ಡ ಕುಲದವರೆಂದು, ಬುದ್ಧಿವಂತರೆಂದು ಅಂದುಕೊಳ್ಳುತ್ತಿದ್ದಾರೆ. ಹಾಗೇ ಕೋಮಟಿ ಕುಲದಲ್ಲಿ ಹುಟ್ಟಿರುವವರು ಯಾರಾದರೂ ಬುದ್ಧಿವಂತರೆಂದು ಹೆಸರು ಇದೆ. ಅವರವರ

ಕುಲ ವೃತ್ತಿಗಳಲ್ಲಿ ಬ್ರಾಹ್ಮಣರು ಒಂದು ವಿಧವಾದ ಕೆಲಸವನ್ನು ಮಾಡಿದರೆ, ವೈಶ್ಯರು ವ್ಯಾಪಾರವನ್ನು ಮಾಡುತ್ತಿದ್ದಾರೆ. ಬ್ರಾಹ್ಮಣರು ಎಂದರೆ ದೈವ ಪೂಜೆ ಮಾಡುವವರೆಂದೂ ಪಂಚಾಂಗವನ್ನು ತಿಳಿದವರೆಂದೂ ಎಲ್ಲರಿಗೂ ಒಂದು ಕುರುಡು ಗುರುತು ಇರುವಾಗ, ವೈಶ್ಯರು ಎಂದರೆ ವ್ಯಾಪಾರ ಮಾಡುವವರೆಂದು ಅಂದುಕೊಂಡಿದ್ದಾರೆ. ಆದರೇ ಎಲ್ಲಿ ನೋಡಿದರೂ ಸಮಾಜದಲ್ಲಿ ಅವರು ಸ್ವಲ್ಪವೂ ಕಷ್ಟ ಪಡದಂತೆ ಬುದ್ಧಿವಂತಿಕೆಯಿಂದ ಬದುಕುತ್ತಿದ್ದಾರೆಂದು ಉಳಿದ ಪ್ರಜೆಗಳು ಎಲ್ಲರೂ ಅಂದುಕೊಳ್ಳುತ್ತಿದ್ದಾರೆ. ಅಷ್ಟೇ ಅಲ್ಲದೆ "ಬ್ರಾಹ್ಮಣನು" ಎಂದರೇ ಬ್ರಹ್ಮ ಜ್ಞಾನ ಇರುವವನೆಂದು ಕೆಲವರನ್ನುವಾಗ, "ಕೋಮಟಿ" ಎಂದರೇ ಪ್ರಪಂಚ ಬುದ್ಧಿಯಲ್ಲಿ ಅವರನ್ನು ಮೀರಿದವರು ಇಲ್ಲ ಎಂದು ಸಹ ಕೆಲವರನ್ನುತ್ತಿದ್ದಾರೆ. ವಾಸ್ತವವಾಗಿ ನೋಡಿದರೆ ಸಮಾಜದಲ್ಲಿ ಬ್ರಾಹ್ಮಣ, ವೈಶ್ಯ ಎಂಬ ಎರಡು ಕುಲಗಳು ಅಗ್ರಕುಲಗಳಾಗಿ ಲೆಕ್ಕಿಸಲಾಗಿರುವಾಗ, "ಬುದ್ಧಿಯಲ್ಲಿ ಅವರಿಬ್ಬರಿಗೂ ಯಾರೂ ಸರಿಬರುವುದಿಲ್ಲ" ಎಂಬ ಭಾವ ಎಲ್ಲರ ಮನಸ್ಸಿನಲ್ಲಿ ಇದೆ. ಇಂದಿಗೂ ಅವರು ಬುದ್ಧಿವಂತಿಕೆಯಿಂದ ಮಾತನಾಡುವುದಾಗಲೀ, ಬುದ್ಧಿವಂತಿಕೆಯಿಂದ ಪ್ರವರ್ತಿಸುವುದಾಗಲೀ ಎಲ್ಲರೂ ಗಮನಿಸಬಹುದು.

"ಬ್ರಹ್ಮಜ್ಞಾನ" ಎಂದರೆ ದೇವರ ಜ್ಞಾನ. ಬ್ರಹ್ಮ ಎಂದರೆ ದೊಡ್ಡ ಎಂದು ಅರ್ಥ. ಬ್ರಹ್ಮಜ್ಞಾನ ಎಂದರೆ ದೊಡ್ಡ ಜ್ಞಾನವೆಂದು ಹೇಳಬೇಕು. ಪ್ರಪಂಚದಲ್ಲಿ ಎಲ್ಲದಕ್ಕಿಂತ ದೊಡ್ಡ ಜ್ಞಾನ ದೇವರ ಜ್ಞಾನ ಹೊರತು ಮತ್ತೊಂದು ಇಲ್ಲ. ಅಂದಿನ ಕಾಲದಲ್ಲಿ ಸೂರ್ಯವಂಶದವರಾದ ಪುರೋಹಿತರು ಪ್ರಜೆಗಳ ಕಡೆ ತಾವು ಹೇಗಿರುವುದು ಎಲ್ಲರಿಗೂ ಅರ್ಥವಾಗಬೇಕೆಂದು, ತಮ್ಮನ್ನು ಪುರದಲ್ಲಿ ನಿವಾಸಿಸುವ ಪ್ರಜೆಗಳಿಗೆ ಒಳ್ಳೆಯದನ್ನು ಮಾಡುವವರೆಂದು ತಿಳಿಯುವಹಾಗೆ ತಮ್ಮನ್ನು ತಾವು "ಪೌರೋಹಿತರು" ಎಂದು ಹೇಳಿಕೊಂಡಿದ್ದಾರೆ. ಅದಕ್ಕೆ ತಕ್ಕ ವಿಧವಾಗಿ ಪ್ರಜೆಗಳಿಗೆ ಒಳ್ಳೆಯದನ್ನು ಮಾಡುವಹಾಗೆ ಪ್ರತಿಯೊಂದಕ್ಕೂ ಮುಹೂರ್ತ ಕಾಲವನ್ನು ಹೇಳುತ್ತಿದ್ದರು. ಆ ರೀತಿ ಜನರಿಗೆ ಪರಿಚಯವಾದ ನಂತರ ತಮ್ಮ ಚರಿತ್ರೆಯನ್ನು ಮರೆತವರಾಗಿ ಕೊನೆಗೆ ತಾವು ಸೂರ್ಯ

ವಂಶದವರೆಂದು ಸಹ ತಿಳಿಯದಂತೆ ಹೋಗಿದೆ. ಒಂದು ವರ್ಗದ ಬೋಧಕರ ಕೆಲಸ ಆ ವಿಧವಾಗಿ ಬದಲಾಗುವುದೇ ಅಲ್ಲದೆ, ಅವರು ಪ್ರಜೆಗಳಿಗೆ ದೇವರ ಜ್ಞಾನ ಹೇಳುವುದನ್ನು ಬಿಟ್ಟು, ಕೊನೆಗೆ ಪೂರ್ತಿಯಾಗಿ ಪಂಚಾಂಗಗಳಿಗೇ ಪರಿಮಿತವಾಗಿದ್ದಾರೆ. ಈ ವಿಧವಾಗಿ ಸ್ವಲ್ಪ ಕಾಲಕ್ಕೆ ನಿಜ ದೈವಜ್ಞಾನ ಅವರಿಗೇ ತಿಳಿಯದಂತೆ ಹೋಗಿದೆ. ಅವರಿಗೆ ತಿಳಿದಿರುವುದೆಲ್ಲಾ ಪಂಚಾಂಗ, ಅದರಲ್ಲಿನ ನಕ್ಷತ್ರಗಳು, ಗ್ರಹಗಳು. ಇವರ ಪರಿಸ್ಥಿತಿ ಹೀಗೆ ತಯಾರಾಗಿರುವಾಗ ಪೂರ್ವ ಚಂದ್ರವಂಶದವರೆಂದು ಹೇಳಿಕೊಂಡ ಬೋಧಕರು ಸೂರ್ಯವಂಶ ಬೋಧಕರಿಗೆ ಪೋಟಿಯಾಗಿ ತಯಾರಾಗುವುದಕ್ಕೆ, ಅವರಿಗಿಂತ ತಾವೇ ದೊಡ್ಡವರೆಂದು ತಿಳಿಯುವುದಕ್ಕೆ ಸೂರ್ಯವಂಶದವರೊಂದಿಗೆ ನಿರ್ವಹಿಸಿದ ಅಧಿಕಾರದ ಹೋರಾಟದಲ್ಲಿ ಪೂರ್ತಿ ಲಗ್ನವಾಗಿ ಜನರಿಗೆ ಪ್ರಪಂಚ ವಿಷಯಗಳಲ್ಲಿ ಹೆಚ್ಚಿನ ಮೇಲು ಮಾಡುತ್ತಾ, ನಾವು ನಿಮಗೆ ಪರಮಾತ್ಮ ಜ್ಞಾನ ಸಮಾಚಾರವನ್ನು ತಿಳಿಸುವವರೆಂದು ಅರ್ಥವಾಗುವಂತೆ, ಜನರಿಗೆ ಪ್ರಪಂಚ ವಿಷಯಗಳಲ್ಲಿ ಸಾಮಾಗ್ರಿಗಳನ್ನು ಒದಗಿಸಿದರೂ, ಪರಮಾತ್ಮ ವಿಷಯದಲ್ಲಿ ದೇವರ ಜ್ಞಾನಸಮಾಚಾರ ವನ್ನು ತಿಳಿಸುವ ವಾರ್ತಕರೆಂದು ಹೇಳಿಕೊಂಡರು. ವಾರ್ತೆ ಎಂದರೆ ತಿಳಿಯುವ ಸಮಾಚಾರ ಎಂದು ಅರ್ಥ. ತಿಳಿಯುವ ಸಮಾಚಾರ ಪ್ರಪಂಚದ್ದು ಆಗಬಹುದು, ಪರಮಾತ್ಮದ್ದು ಆಗಬಹುದು. ಅದರೇ ಇಲ್ಲಿ ದೇವರ ಜ್ಞಾನವನ್ನು ತಿಳಿಸುವವರಾಗಿ ಅವರನ್ನು ಅವರು **"ವಾರ್ತಕರು"** ಎಂದು ಹೇಳಿಕೊಂಡ ಚಂದ್ರವಂಶದವರು ಪೂರ್ತಿ ದೈವವಾರ್ತೆಗಳನ್ನು ಹೇಳದೆ ಪ್ರಪಂಚ ವಿಷಯಗಳನ್ನೇ ಹೆಚ್ಚಾಗಿ ಹೇಳುತ್ತಿದ್ದರು. ತಾವು ಚಂದ್ರವಂಶ ಬೋಧಕರೆನ್ನುವ ವಿಷಯವನ್ನು ಮರೆತುಹೋಗಿ, ತಾವು ಜ್ಞಾನ ವಾರ್ತಕರೆನ್ನುವ ವಿಷಯ ಜ್ಞಾಪಕ ಇಲ್ಲದವರಾಗಿ, ತಮ್ಮ ಹೆಸರು ವಾರ್ತಕರೆಂದು ಪೂರ್ವದಲ್ಲಿ ಕರೆಯಲಾಗಿದೆಯೆಂದು, ಅದಕ್ಕೆ ಇಂತಹ ಅರ್ಥವಿದೆಯೆಂದು ತಿಳಿಯದವರಾಗಿ ಈ ದಿನ ಹೆಸರನ್ನು ಬದಲಾಯಿಸಿ ನಾವು ವರ್ತಕರು ಎನ್ನುತ್ತಿದ್ದಾರೆ. ಈ ವಿಧವಾಗಿ ವಾರ್ತಕರು ವರ್ತಕರಾಗಿದ್ದಾರೆ. ಪೌರೋಹಿತರು ಎನ್ನುವ ಹೆಸರು ಸ್ವಲ್ಪ ಬದಲಾವಣೆಯಾಗಿ ಪುರೋಹಿತರೆಂದು ಕರೆಯಲ್ಪಟ್ಟರೂ, ಅದರಲ್ಲಿ ಅರ್ಥ

ದೊಡ್ಡದಾಗಿ ಬದಲಾಗುವುದಿಲ್ಲ ಆದರೆ, ವಾರ್ತಕರು ಹೋಗಿ ವರ್ತಕರು ಆದಾಗ ಅದರಲ್ಲಿನ ಮೊದಲನೆಯ ರಹಸ್ಯ ತಿಳಿಯದಂತಾಗಿದೆ.

ಬಹುಮುಖ ಪ್ರಜ್ಞಾಶಾಲಿಯಾದ ಪುರೋಹಿತರಾಗಲೀ, ವರ್ತಕರಾಗಲೀ ತಮ್ಮ ಪ್ರಜ್ಞೆ ಪ್ರಪಂಚದಲ್ಲಿ ಅನೇಕ ಕಡೆ ಮುಖಗಳು ಹೊಂದಿರುವುದಾಗಿದ್ದರೂ, ಕೊನೆಗೆ ಅಂತರ್ಮುಖ ಪ್ರಜ್ಞೆ ಇಲ್ಲದಂತಾಗಿದೆ. ಗತ ಚರಿತ್ರೆಯಲ್ಲಿ ಪ್ರಪಂಚ ಪ್ರಜೆಗಳೆಲ್ಲರಿಗೂ ದೈವ ಜ್ಞಾನವನ್ನು ಒದಗಿಸಿ, ಎಲ್ಲರಿಗಿಂತ ಅಗ್ರ ಕುಲದವರೆಂದು ಹೆಸರು ಪಡೆದರೂ, ಈದಿನ ಆ ಹೆಸರಿಗೆ ತಕ್ಕಂತೆ ಇಲ್ಲದಂತೆ ಹೋಗಿದ್ದಾರೆಂದು ಹೇಳಬಹುದು. ಇದು ಕಲಿಯುಗ. ಮೊದಲನೆಯದು ಕೃತಯುಗ. ಅಂದಿಗೂ ಇಂದಿಗೂ ಸುಮಾರು 2 ಲಕ್ಷಗಳ ಸಂವತ್ಸರಗಳ ಚರಿತ್ರೆ ಇದೆ. ಆ ಚರಿತ್ರೆಯಲ್ಲಿ ಈದಿನ ಪುರೋಹಿತರೆಂದು ಅನಿಸಿಕೊಂಡ ಬ್ರಾಹ್ಮಣರು, ವರ್ತಕರು ಎಂದು ಕರೆಯಲಾಗಿರುವ ಕೋಮಟಿಯವರು, ಅವರ ಅಧಿಕಾರದ ಹೋರಾಟ ಸ್ವಲ್ಪ ಮಟ್ಟಿಗೆ ಮುಂದುವರಿಸಿ ಕೊನೆಗೆ ಅವರ ಅಧಿಕಾರವನ್ನು ಅವರೇ ಮರೆತುಹೋಗಿದ್ದಾರೆ. ಎರಡು ಗುಂಪುಗಳಾಗಿ ಇರುವವರು "ನಾನು ದೊಡ್ಡವರು" ಅನಿಸಿಕೊಳ್ಳುವುದಕ್ಕೆ ಒಬ್ಬರಿಗಿಂತ ಮತ್ತೊಬ್ಬರು ಮುಂದಕ್ಕೆ ಹೋಗಬೇಕೆನ್ನುವ ಉದ್ದೇಶದಿಂದ ಚರಿತ್ರೆಯಲ್ಲಿ ತಮ್ಮನ್ನು ಇನ್ನೂ ಕೆಲವು ಹೆಸರುಗಳಿಂದ ಕರೆಸಿಕೊಂಡಿದ್ದಾರೆ. ಗತದಲ್ಲಿ ಅವರ ಹೆಸರುಗಳು ಇನ್ನೂ ಯಾವು ಇರುತ್ತಿದ್ದವು? ಅವು ಕೊನೆಗೆ ಹೇಗೆ ಬದಲಾಗಿ ಹೋಗಿವೆ? ಈ ದಿನ ಯಾವ ರೂಪದಲ್ಲಿ ಕರೆಯಲಾಗುತ್ತಿವೆಯೋ ಸ್ವಲ್ಪ ವಿವರಿಸಿಕೊಂಡು ನೋಡೋಣ. ಇಲ್ಲಿ ಕೆಲವರು ಒಂದು ಪ್ರಶ್ನೆಯನ್ನು ಕೇಳಬಹುದು. ಅದೇನೆಂದರೇ! ಮೇಧಾವಿಗಳಾಗಿರುವ ಅವರ ಚರಿತ್ರೆ ಅವರಿಗೇ ತಿಳಿಯದಿರುವಾಗ, ಈಗ ನಿನಗೆ ಹೇಗೆ ತಿಳಿದಿದೆ? ಕಳೆದುಹೋದ ಕಾಲಗರ್ಭದಲ್ಲಿ ಸೇರಿಹೋದ ಚರಿತ್ರೆಯನ್ನು ನೀವು ಹೇಗೆ ಹೇಳುತ್ತಿದ್ದೀರ? ಎಂದು ಕೇಳಬಹುದು. ಅದಕ್ಕೆ ಉತ್ತರವಾಗಿ ನಾವು ಹೀಗೆ ಹೇಳುತ್ತಿದ್ದೇವೆ.

ಭವಿಷ್ಯತ್ತು ಅಂಧಕಾರವಾದದ್ದು. ಆದ್ದರಿಂದ ಮುಂದೆ ನಡೆಯುವುದನ್ನು ಹೇಳುವುದು ಬಹಳ ಕಷ್ಟವಾಗುತ್ತದೆ. ಭವಿಷ್ಯತ್ತನ್ನು ಆತ್ಮ ತಿಳಿಸಿದರೇ ಹೊರತು ಯಾರೂ ಹೇಳಲಾರರು. ವೀರಬ್ರಹ್ಮಯ್ಯರವರಿಗೆ ಆತ್ಮ ತಿಳಿಸಿದ ಸಮಾಚಾರ ವನ್ನನುಸರಿಸಿ ಆತನು ಅನೇಕ ಭವಿಷ್ಯತ್ತು ವಿಷಯಗಳನ್ನು ಹೇಳಿದ್ದಾನೆ. ಆತನು ಹೇಳಿರುವವೆಲ್ಲಾ, ಆದಿನ ಭವಿಷ್ಯತ್ತು ವಿಷಯಗಳೇ ಆದರೂ ಈ ದಿನ ವರ್ತಮಾನಕಾಲದಲ್ಲಿ ಸತ್ಯವಾಗುತ್ತಿವೆ. ಆದರೇ ನಡೆದುಹೋದ ಕಾಲವನ್ನು ಹೇಳುವುದರಲ್ಲಿ ಎಲ್ಲರೂ ಅಂದುಕೊಂಡಷ್ಟು ಕಷ್ಟವಿರುವುದಿಲ್ಲವೆಂದು ನಾವು ಅಂದುಕೊಳ್ಳುತ್ತಿದ್ದೇವೆ. ನಾಳೆ ನಡೆಯುವುದನ್ನು ಈದಿನ ಇರುವ ಪರಿಸ್ಥಿತಿಯನ್ನನುಸರಿಸಿ ಊಹಿಸಿ ಹೇಳಬಹುದು. ಆದರೇ ಯಾವಾಗಲೋ ಕೆಲವು ಲಕ್ಷಗಳ ಸಂವತ್ಸರಗಳ ಪೂರ್ವದಲ್ಲಿ ಕಳೆದುಹೋಗಿರುವುದನ್ನು ಕುರಿತು ಹೇಗೆ ಹೇಳಲಾಗುತ್ತದೆ? ಎಂದು ಕೆಲವರು ಅವರ ಭಾವವನ್ನು ವ್ಯಕ್ತಪಡಿಸಬಹುದು. ಅದಕ್ಕೆ ನಾವು ಹೇಳುವ ಸಮಾಧಾನ ಈ ವಿಧವಾಗಿದೆ. ಕಾಲಗಳು ಮೂರು ಹೆಸರುಗಳಿಂದ ಇವೆ. ನಡೆಯುತ್ತಿರುವ ಕಾಲವನ್ನು ವರ್ತಮಾನ ಕಾಲ ಎಂದು ಅನ್ನುತ್ತಿದ್ದೇವೆ. ಮುಂದೆ ನಡೆಯಬೇಕಾಗಿರುವ ಕಾಲವನ್ನು ಭವಿಷ್ಯತ್ತು ಕಾಲ ಅನ್ನುತ್ತಿದ್ದೇವೆ. ನಡೆದುಹೋದ ಕಾಲವನ್ನು ಭೂತಕಾಲ ಅನ್ನುತ್ತಿದ್ದೇವೆ. ಈ ಮೂರು ಹೆಸರುಗಳಲ್ಲಿ ಎರಡು ಹೆಸರುಗಳು ಪೂರ್ವವಿದ್ದಂತೇ ಇವೆ. ಆದರೇ ಒಂದು ಹೆಸರು ಮಾತ್ರ ಸ್ವಲ್ಪ ಬದಲಾಗಿ ಇದೆ. ನಡೆಯುತ್ತಿರುವ ಕಾಲ ಹೊರಗೆ ತಿಳಿಯುವುದಾಗಿ ಇದೆ. ಎಲ್ಲರಿಗೂ ವ್ಯಕ್ತವಾಗುವ ಕಾಲವು ಆದ್ದರಿಂದ ನಡೆಯುತ್ತಿರುವ ಕಾಲವನ್ನು **“ವ್ಯಕ್ತಮಾನ ಕಾಲ”** ಎಂದು ಅನ್ನುತ್ತಿದ್ದರು. ಆ ಹೆಸರು ಕಾಲದಲ್ಲಿ ಸ್ವಲ್ಪ ಬದಲಾವಣೆ ಹೊಂದಿ ಕೊನೆಗೆ “ವ್ಯಕ್ತಮಾನ” ಹೋಗಿ “ವರ್ತಮಾನ” ಎಂದು ಕರೆಯಲಾಗುತ್ತಿದೆ. “ವ್ಯಕ್ತ” ಎಂಬ ಪದದಲ್ಲಿ ‘ತ’ ಉಳಿದುಹೋಗಿ ‘ಯ’ ವತ್ತು ಎಗರಿಹೋಗಿದೆ. ಹಾಗೇ ಎರಡನೇ ಅಕ್ಷರವಾದ “ಕ್ತ” ಎಂಬ ಅಕ್ಷರದಲ್ಲಿ ‘ಕ’ ಎಗರಿಹೋಗಿ ‘ರ’ ಬಂದು ಸೇರಿಕೊಂಡಿದೆ. ಕೆಳಗಿರುವ ‘ತ’ ವತ್ತು ಹಾಗೇ ಉಳಿದಿರುವುದರಿಂದ “ವ್ಯಕ್ತ” ಎಂಬ ಪದ ಬದಲಾಗಿ “ವರ್ತ” ಎಂಬ ಪದವಾಗಿ ಉಳಿದುಕೊಂಡಿದೆ.

ಪ್ರಸ್ತುತ ಸಮಯದಲ್ಲಿ ತಿಳಿಯುತ್ತಿರುವ ಕಾಲವನ್ನು ಪೂರ್ವವು ವ್ಯಕ್ತ ಕಾಲ ಅನ್ನುತ್ತಿದ್ದರು, ಅದೇ ಪದವೇ ಈ ದಿನ ವರ್ತ ಎಂಬ ಶಬ್ಧವಾಗಿ ಬದಲಾಗಿದೆ. ಭಗವದ್ಗೀತೆಯಲ್ಲಿ 2, 7, 8, 12 ಅಧ್ಯಾಯಗಳಲ್ಲಿ "ಅವ್ಯಕ್ತ" ಎಂಬ ಪದ ಬಹಳ ಕಡೆ ಉಪಯೋಗಿಸಿ ಹೇಳಲಾಗಿದೆ. "ಅವ್ಯಕ್ತ" ಎಂದರೆ ತಿಳಿಯದಿರುವುದು ಎಂದು ಅರ್ಥ. ದೇವರು ಅವ್ಯಕ್ತನು ಎಂದು ಹೇಳುವುದರಿಂದ ದೇವರು ತಿಳಿಯುವವನು ಅಲ್ಲ ಎಂದು ತಿಳಿಯುತ್ತಿದೆ. ಪ್ರಸ್ತುತ ನಡೆಯುತ್ತಿರುವ ಕಾಲವನ್ನು "ವ್ಯಕ್ತ ಕಾಲ" ಅನ್ನುವುದು ಹೋಗಿ "ವರ್ತಕಾಲ" ಅನ್ನುತ್ತಿದ್ದಾರೆ. ನಡೆದುಹೋದ ಕಾಲವನ್ನು ಭೂತ ಕಾಲ ಎನ್ನುತ್ತಿದ್ದಾರೆ. ಮುಂದೆ ನಡೆಯಬೇಕಾಗಿರುವ ಕಾಲವನ್ನು ಭವಿಷ್ಯತ್ತು ಕಾಲ ಅನ್ನುತ್ತಿದ್ದಾರೆ. ಭವಿಷ್ಯತ್ತು ಎಂಬ ಪದದ ಹತ್ತಿರವಾಗಲೀ, ಭೂತ ಎಂಬ ಪದದ ಹತ್ತಿರವಾಗಲೀ ಉಪಯೋಗಿಸದ "ಮಾನ" ಎಂಬ ಪದವನ್ನು "ವರ್ತ" ಎಂಬ ಪದದ ಹತ್ತಿರ ಉಪಯೋಗಿಸಿ ವರ್ತಮಾನ ಕಾಲ ಅನ್ನುತ್ತಿದ್ದೇವೆ. 'ಮಾನ' ಎಂದರೆ ಅಳತೆ ಎಂದು ಅರ್ಥ. ನಡೆಯುತ್ತಿರುವ ಕಾಲ ಕ್ಷಣಕ್ಷಣವೂ ವಿಭಜಿಸಲ್ಪಟ್ಟು ತಿಳಿಯುವುದರಿಂದ 'ಮಾನ' ಎಂಬ ಶಬ್ಧವನ್ನು ಉಪಯೋಗಿಸಿ ವರ್ತಮಾನ ಕಾಲ ಎಂದು ಹೇಳಿದ್ದಾರೆ. ವಾಸ್ತವವಾಗಿ ಆ ಪದವನ್ನು ವ್ಯಕ್ತ ಮಾನಕಾಲ ಎಂದು ಅನ್ನಬೇಕಾಗಿರುತ್ತದೆ. ಹಾಗೆ ಅಂದರೇ ಅದಕ್ಕೆ ಅರ್ಥ ಸರಿಹೋಗುತ್ತದೆ. ಇನ್ನು ನಡೆದುಹೋದ ಕಾಲವನ್ನು ಭೂತ ಕಾಲ ಅನ್ನಲಾಗುತ್ತದೆ. ವಾಸ್ತವ ಅರ್ಥದ ಪ್ರಕಾರ ಈ ಪದ ಪೂರ್ವದಿಂದ ಸ್ವಲ್ಪವೂ ಬದಲಾವಣೆ ಹೊಂದದೇ ಹಾಗೆಯೇ ಇದೆಯೆಂದು ಹೇಳಬಹುದು. ಭೂತಕಾಲ ಎಂದರೆ ಜೀವವಿರುವ ಕಾಲ ಎಂದು ಹೇಳಬಹುದು. ಭವಿಷ್ಯತ್ತು ಕಾಲವನ್ನು ಹುಟ್ಟಬೇಕಾಗಿರುವ ಮಗುವಿನೊಂದಿಗೆ ಸಮಾನವಾಗಿ ಹೋಲಿಸಬಹುದು. ವರ್ತಮಾನ ಕಾಲವನ್ನು ಪ್ರಸವಿಸಲ್ಪಡುತ್ತಿರುವ ಮಗುವಿನೊಂದಿಗೆ ಸಮಾನವಾಗಿ ಹೋಲಿಸಬಹುದು. ಭೂತಕಾಲವನ್ನು ಹುಟ್ಟಿ ಉಸಿರಾಡುತ್ತಿರುವ ಮಗುವಿನೊಂದಿಗೆ ಸಮಾನವಾಗಿ ಹೋಲಿಸಬಹುದು.

**"ಜನನ ಮರಣ ಸಿದ್ಧಾಂತದ"** ಪ್ರಕಾರ ಗರ್ಭಸ್ತ ಶಿಶುವಿಗೆ ಪ್ರಾಣವಿಲ್ಲ. ಪ್ರಸವಿಸಲ್ಪಡುತ್ತಿರುವ ಶಿಶುವಿಗೆ ಪ್ರಾಣ ಇಲ್ಲ. ಪ್ರಸವಿಸಿದ ನಂತರ ಶಿಶುವಿಗೆ ಪ್ರಾಣ ಬರುವುದು ಸಹಜ. ಆದ್ದರಿಂದ ಮುಂಬರುವ ಭವಿಷ್ಯತ್ತಿಗೆ ಪ್ರಾಣವಿಲ್ಲ. ನಡೆಯುತ್ತಿರುವ ವರ್ತಮಾನಕ್ಕೆ ಪ್ರಾಣವಿಲ್ಲ. ಆದರೇ ನಡೆದುಹೋದ ನಂತರ ನಡೆದ ಕಾಲಕ್ಕೆ ಪ್ರಾಣ ಬರುತ್ತಿದೆ, ಅದಕ್ಕೆ ಜೀವವಿದೆ. ಆದ್ದರಿಂದ ನಡೆದುಹೋದ ಕಾಲವನ್ನು ಭೂತ ಕಾಲ ಎಂದು ತಿಳಿದ ಜ್ಞಾನಿಗಳು ಹೆಸರು ಇಟ್ಟಿದ್ದಾರೆ. ಭೂತಕಾಲ ಎಂದರೆ ನಡೆದುಹೋದ ಕಾಲವೆಂದು ಎಲ್ಲರಿಗೂ ತಿಳಿದಿದೆ. ನಡೆದುಹೋದ ಕಾಲ ಜೀವವಿರುವುದಾಗಿ ಇರುವುದರಿಂದ ಅದಕ್ಕೆ ತನ್ನಲ್ಲಿ ಕಳೆದ ಚರಿತ್ರೆ ಎಲ್ಲವೂ ತಿಳಿದಿದೆ. ಭೂತಕಾಲಕ್ಕೆ ತಿಳಿಯದ ಚರಿತ್ರೆ ಯಾವುದೂ ಇಲ್ಲ. ನಡೆಯಬೇಕಾಗಿರುವುದು ತಿಳಿಯದು, ನಡೆಯುತ್ತಿರುವುದು ತಿಳಿಯುತ್ತದೆ. ನಡೆದುಹೋಗಿರುವುದು ಭೂತಕಾಲದಲ್ಲಿ ಜೀವವನ್ನು ಹೊಂದಿದ ಭೂತಕ್ಕೆ (ಜೀವಕ್ಕೆ) ಚರಿತ್ರೆ ಎಲ್ಲವೂ ತಿಳಿಯುತ್ತದೆ. **ಕಳೆದು ಹೋದ ಕಾಲಕ್ಕೆ ಜೀವವಿದೆ ಎನ್ನುವ ಮಾತು ಗತದಲ್ಲಿ ಯಾರೂ ಹೇಳದ ಮಾತು ಆಗಿರುವುದರಿಂದ,** ನನ್ನ ಮಾತಿನ ಮೇಲೆ ನಿಮಗೆ ನಂಬಿಕೆ ಇಲ್ಲದಂತಾಗಬಹುದು. ಯಾರಿಗಾದರೂ ಈ ವಿಷಯದಲ್ಲಿ ಹಾಗೇ ಅನಿಸುತ್ತದೆ. ಆದರೇ ನಂಬಿದರೂ ನಂಬದೇ ಹೋದರೂ, ನನ್ನ ಮಾತನ್ನು ನಾನೂ ಸಹ ಅಲ್ಲ ಎನ್ನಲಾರೆನು. ಏಕೆಂದರೆ ಅದು ಇಲ್ಲಿಯವರೆಗು ಯಾರಿಗೂ ತಿಳಿಯದ ಸತ್ಯ. ನಡೆದುಹೋದ ಭೂತಕಾಲವೊಂದರ ಭೂತವನ್ನು (ಜೀವಿಯನ್ನು) ವಿನಯದಿಂದ ಕೇಳಿದರೇ, ಆ ಜೀವಿಯು ತನ್ನಲ್ಲಿ ನಡೆದುಹೋದ ಚರಿತ್ರೆಯನ್ನು ತಪ್ಪದೆ ಹೇಳುತ್ತದೆ. ಯಾರಾದರೇ ಜ್ಞಾನಿಯಾಗಿದ್ದು ತನ್ನ ಸ್ವಾರ್ಥಕ್ಕೆ ಅಲ್ಲದೇ, ಲೋಕಕ್ಕೆ ಜ್ಞಾನವನ್ನು ತಿಳಿಸುವ ನಿಮಿತ್ತ ಕೇಳಿದರೆ, ಭೂತಕಾಲವೊಂದರ ಭೂತ(ಜೀವಿಯು) ಜ್ಞಾನಿಯನ್ನು ನೋಡಿದರೆ ಸಂತೋಷಪಟ್ಟು ತನ್ನಲ್ಲಿರುವ ಚರಿತ್ರೆಯನ್ನು ಹೇಳಬಲ್ಲನು.

ಭೂತಕಾಲವೆಂದು ಹೆಸರು ಇಟ್ಟಷ್ಟು ಮಾತ್ರಕ್ಕೆ ನಡೆದುಹೋದ ಕಾಲದಲ್ಲಿ ಜೀವಿಯು ಇರುತ್ತಾನಾ? ಎಂದು ಕೆಲವರು ಪ್ರಶ್ನಿಸಬಹುದು. ಅದಕ್ಕೆ ನಮ್ಮ ಉತ್ತರ ಈ ರೀತಿ ಇದೆ. ಭೂತಗಳ ವಿಷಯಗಳು ತಿಳಿದು ಬರುವುದಿಲ್ಲವೆಂದು ಭಗವದ್ಗೀತೆಯಲ್ಲಿ ಸಾಂಖ್ಯಯೋಗದಲ್ಲಿ 28ನೇ ಶ್ಲೋಕದಲ್ಲಿ ದೇವರು ಹೀಗೆ ಹೇಳಿದ್ದಾರೆ. **"ಅವ್ಯಕ್ತಾ ದೀನಿ ಭೂತಾನಿ"** "ಭೂತಗಳ ಸಂಭವಗಳು ವ್ಯಕ್ತವಾಗುವುದಿಲ್ಲ" ಎಂದು ಹೇಳಿದ್ದಾರೆ. ಭೂತ ಎಂದರೆ ಜೀವಿಯು ಶರೀರದಲ್ಲಿ ಹೇಗೆ ನಿವಾಸ ಮಾಡುತ್ತಿರುವುದು, ಯಾವ ಜೀವಿಗೆ ಯಾವುದು ಶರೀರವಾಗಿದೆ, ಗ್ರಹಗಳಿಗೆ ಶರೀರ ಹೇಗಿರುತ್ತದೋ, ಗೋಳವಾಗಿರುವ ಗ್ರಹದಲ್ಲಿ ಜೀವಿಯು ಹೇಗಿರುತ್ತದೋ ತಿಳಿಯದೇ ಹೋದರೇ ಈ ವಿಷಯ ಯಾರಿಗೂ ಸುಲಭವಾಗಿ ಅರ್ಥವಾಗುವುದಿಲ್ಲ. ಆದ್ದರಿಂದ ಜೀವರಾಶಿಗಳ ವಿಷಯ ಸುಲಭವಾಗಿ ವ್ಯಕ್ತವಾಗುವುದಿಲ್ಲ ಎಂದು ಹೇಳಿದ್ದಾರೆ. ಈಗ ನಾವು ಹೇಳಿರುವುದು ಕಾಲವೊಂದರ ಭೂತವನ್ನು ಕುರಿತು ಹೇಳಿದ್ದೇವೆ. ಗತದಲ್ಲಿ ರೋಗಗಳು ಕೂಡಾ ಭೂತಗಳೇ ಎಂದು ಹೇಳಿದ್ದೇವೆ. ಆಗ ರೋಗ ಒಂದು ಭೂತ ಎಂದರೆ ನಮ್ಮ ಮಾತನ್ನು ಯಾರೂ ನಂಬಲಿಲ್ಲ. ರೋಗದಲ್ಲಿ ಪ್ರತ್ಯೇಕಿಸಿ ಕ್ಯಾನ್ಸರ್ ಒಂದು ಭೂತವೆಂದೂ, ಎಯಿಡ್ಸ್ ರೋಗ ಮತ್ತೊಂದು ಭೂತವೆಂದೂ ಹೇಳಿದ್ದೇವೆ. ಹಾಗೇ ಕಳೆದುಹೋದ ಕಾಲವೂ ಒಂದು ಭೂತವೇ ಎಂದು ನಾವು ಹೇಳುತ್ತಿದ್ದೇವೆ. ರೋಗವು ದೈವಜ್ಞಾನಿ ಮಾತು ಕೇಳುತ್ತದೆಂದೂ, ಆತನು ಹೇಳಿದಹಾಗೆ ನಡೆದುಕೊಳ್ಳುತ್ತದೆಂದೂ ಸಹ ಹೇಳಿದ್ದೇವೆ. ಜ್ಞಾನಿ ಹೇಳಿದಂತೆ ನಡೆದುಕೊಂಡು, ರೋಗ ಒಬ್ಬ ವ್ಯಕ್ತಿಯಿಂದ ದೂರವಾಗಿ ಹೋದಾಗ, ಆ ವ್ಯಕ್ತಿ ಮಾತನ್ನು ಕೇಳಿದಹಾಗೆ ಅಲ್ಲವೆ! ರೋಗವಾಗಿರುವ ಭೂತ ಜ್ಞಾನಿ ಮಾತನ್ನು ಕೇಳಿದಾಗ, ಕಾಲವಾಗಿರುವ ಭೂತ ಏಕೆ ಮಾತು ಕೇಳುವುದಿಲ್ಲ! ಆದ್ದರಿಂದ ದೈವಜ್ಞಾನಿ ಗತಚರಿತ್ರೆಯಲ್ಲಿನ ವಿಷಯವನ್ನು ಕೇಳಿದರೇ, ಭೂತಕಾಲ ಜ್ಞಾನಿ ಆದ ವ್ಯಕ್ತಿಗೆ ಗತ ಚರಿತ್ರೆಯಲ್ಲಿನ ವಿಷಯಗಳನ್ನು ತಿಳಿಸಬಲ್ಲದು. **ರೋಗ ಒಂದು ಭೂತ, ಮೇಘ ಒಂದು ಭೂತ, ಭೂತಕಾಲವೂ ಸಹ ಒಂದು ಭೂತವೇ**. ಆದ್ದರಿಂದ ಕಾಲಕ್ಕೆ ಭೂತಕಾಲ ಎಂದು ಹೆಸರು ಇಟ್ಟಿದ್ದಾರೆ. ರೋಗಭೂತ ಜ್ಞಾನಿಯಾದ

ಮನುಷ್ಯನ ಮಾತನ್ನು ಕೇಳಿ, ಜ್ಞಾನದ ಮೇಲಿನ ಗೌರವದಿಂದ ಆತನು ಹೇಳಿದಹಾಗೆ ನಡೆದುಕೊಳ್ಳುವುದಾಗಿದೆ. ಅದೇ ವಿಧವಾಗಿ ಮೇಘವು ಎಂಬ ಭೂತ ಕೂಡಾ ಜ್ಞಾನಿ ಮಾತನ್ನು ಆಲಿಸಿ, ಅದರ ಪ್ರಕಾರ ನಡೆದುಕೊಂಡಿದೆ. ಕಾಲಭೂತ ಸಹ ಜ್ಞಾನಿ ಮಾತನ್ನು ಕೇಳುವುದು ಆ ಮಾತಿನ ಪ್ರಕಾರ ತನಗೆ ಕೈಲಾಗಿರುವುದು ಮಾಡುತ್ತದೆ. ಆ ಭೂತಗಳಿಗೆ ದೈವಜ್ಞಾನದ ಮೇಲೆ ಎಷ್ಟೋ ಗೌರವವಿರುವುದರಿಂದ ಅವರು (ಭೂತಗಳು) ಜ್ಞಾನವಿರುವವನನ್ನು ಗೌರವಿಸುತ್ತಿದ್ದಾರೆ. ನಾಳೆ ಸತ್ತುಹೋಗುತ್ತಾನೆ ಎನ್ನುವ ರೋಗವಿರುವವನು ಸಹ ಜ್ಞಾನಿ ಹೇಳಿದ ಮಾತಿನಿಂದ ಆ ಮನುಷ್ಯನಲ್ಲಿರುವ ರೋಗ ಭೂತ ದೂರವಾಗಿ ಹೋಗಿ, ಆತನಲ್ಲಿ ರೋಗ ಕಾಣಿಸದಂತೆ ಹೋಗುವುದು ಆಶ್ಚರ್ಯವೇ ಆದಾಗ, ಕಾಲಭೂತ ತನ್ನ ಚರಿತ್ರೆ ಕಾಲದಲ್ಲಿ ನಡೆದ ವಿಷಯಗಳನ್ನು ತಿಳಿಸುತ್ತದೆ ಎಂದು ನಾವು ಅನ್ನುವುದರಲ್ಲಿ ಆಶ್ಚರ್ಯವಿಲ್ಲವಲ್ಲ!

ನಾವು ಹೇಳುವುದನ್ನು ಕೇಳುವುದಕ್ಕೆ ಆಶ್ಚರ್ಯವಾದರೂ ಅದು ಎಂದಿಗೂ ಸತ್ಯವಾಗಿಯೇ ಇರುತ್ತದೆ. ಭೂತಕಾಲದಲ್ಲಿನ ಭೂತ (ಜೀವಿಯು) ಮಾತನಾಡುವುದಿಲ್ಲ ಆದರೆ, ವಿಷಯವನ್ನು ಪೂರ್ತಿ ತಿಳಿಸುತ್ತಾನೆ. ಆ ವಿಧವಾಗಿ ತಿಳಿದ ಚರಿತ್ರೆ ವಿಷಯಗಳನ್ನೇ ನಾವು ಹೇಳುತ್ತಿದ್ದೇವೆ. ಭೂತಕಾಲದಲ್ಲಿ ಬ್ರಾಹ್ಮಣರನ್ನು ಕುರಿತು ಕೇಳಿದರೇ ಅವರೊಂದಿಗೆ ವೈಶ್ಯರು ಸಹ ತಿಳಿಯುತ್ತಿದ್ದಾರೆ. ಒಂದು ವೇಳೆ ವೈಶ್ಯರನ್ನು ಕುರಿತು ಕೇಳಿದರೆ ಅವರೊಂದಿಗೆ ಸಂಬಂಧಪಟ್ಟಿರುವ ಬ್ರಾಹ್ಮಣರು ಸಹ ತಿಳಿಯುತ್ತಿದ್ದಾರೆ. ಇದಕ್ಕೂ ಮೊದಲು ಬ್ರಹ್ಮಣರು ಪುರೋಹಿತರಾಗಿ ಹೇಗೆ ಕರೆಯಲಾಗಿದ್ದಾರೋ, ವೈಶ್ಯರು ವರ್ತಕರಾಗಿ ಯಾವ ವಿಧದಲ್ಲಿ ಕರೆಯಲಾಗಿದ್ದಾರೋ ಹೇಳಿಕೊಂಡಿದ್ದೇವೆ. ಆಗಲೇ ಕೃತಯುಗದಲ್ಲಿಯೇ ಸ್ವಲ್ಪ ಕಾಲ ಕಳೆದುಹೋದಾಗ ಬ್ರಾಹ್ಮಣರ, ವೈಶ್ಯರ ಅಧಿಕಾರ ಹೋರಾಟ ಹಾಗೇ ಮುಂದುವರೆಯುತ್ತಿತ್ತು. ಪುರೋಹಿತರು ಎನ್ನುವವರು ವರ್ತಕರಿಗಿಂತ ತಮ್ಮನ್ನು ದೊಡ್ಡದಾಗಿ ಪ್ರಜೆಗಳಲ್ಲಿ ವರ್ಣಿಸಿಕೊಳ್ಳುತ್ತಾ, ತಮ್ಮನ್ನು ಭೂಮಿ ಮೇಲೆ ಕಾಣಿಸುವ ದೇವತೆಗಳಂತೆ ತಿಳಿಯುವಹಾಗೆ ತಮ್ಮನ್ನು "ಭೂಸುರರಾ"ಗಿ

ಹೇಳಿಕೊಂಡರು. "ಸುರರು" ಎಂದರೆ ದೇವತೆಗಳು ಎಂದು ಅರ್ಥ. ಪುರೋಹಿತರಾಗಿ ಇರುವವರು ಅಷ್ಟಕ್ಕೆ ನಿಲ್ಲದೆ ತಮ್ಮನ್ನು ಭೂಮಿಮೇಲೆ ತಿರುಗಾಡುವ ದೇವತೆಗಳಾಗಿ ಹೇಳಿಕೊಂಡಾಗ, ಆ ಮಾತನ್ನು ಕೇಳಿದ ಚಂದ್ರವಂಶದವರಾದ ವರ್ತಕರು ತಾವು ಏನೂ ಕಡಿಮೆ ಇಲ್ಲ ಎನ್ನುವಂತೆ, ನಾವು ಭೂಮಿ ಮೇಲೆ ಇರುವ ಪ್ರಜೆಗಳ ಎಲ್ಲರಲ್ಲಿ ಶ್ರೇಷ್ಠರೆಂದು ಹೇಳಿಕೊಂಡರು. "ಶ್ರೇಷ್ಠಿ" ಎಂದರೆ ಶ್ರೇಷ್ಠನಾದವನು ಎಂದು ಅರ್ಥ ಬರಬಲ್ಲದು. ಆಗ ಭೂಮಿಮೇಲೆ ತಿರುಗುವ ದೇವತೆಗಳಿಗಿಂತ ನಾವೇ ಶ್ರೇಷ್ಟರಾದವರೆಂದು ತಿಳಿಸುತ್ತಾ ತಮ್ಮನ್ನು ತಾವು ಶ್ರೇಷ್ಠರಾಗಿ ಪರಿಗಣಿಸಿಕೊಂಡು ತಮ್ಮ ಹೆಸರಿನ ಕೊನೆಯಲ್ಲಿ 'ಶ್ರೇಷ್ಠಿ' ಎನ್ನುವ ಪದವನ್ನು ಸೇರಿಸಿ, ಯಾರು ತಮ್ಮನ್ನು ಕರೆದರೂ ಕೊನೆಗೆ 'ಶ್ರೇಷ್ಠಿ' ಎಂದು ಕರೆಯುವಹಾಗೆ ಮಾಡಿದರು. ಅದರಿಂದ ಬ್ರಾಹ್ಮಣರನ್ನು ಯಾರೂ ದೇವತೆಗಳೆಂದು ಕರೆಯದಿದ್ದರೂ ವೈಶ್ಯರನ್ನು ಮಾತ್ರ ಎಲ್ಲರೂ 'ಶ್ರೇಷ್ಠಿ" ಎಂದು ಕರೆಯುತ್ತಿದ್ದರು. ಬ್ರಾಹ್ಮಣರು ಬುದ್ಧಿವಂತಿಕೆಯಿಂದ ತಮ್ಮನ್ನು ದೇವತೆಗಳಾಗಿ ಹೇಳಿಕೊಂಡರೂ, ಕೆಲವರು ಪ್ರಜೆಗಳು ವೈಶ್ಯರನ್ನು ಶ್ರೇಷ್ಠಿ ಅನ್ನುತ್ತಿದ್ದಾರೆ ಹೊರತು, ಬ್ರಾಹ್ಮಣರನ್ನು ಯಾರೂ ದೇವತೆಗಳೆಂದು ಅನ್ನಲಿಲ್ಲ. ಅದರಿಂದ ಬ್ರಾಹ್ಮಣರಿಗಿಂತ ವೈಶ್ಯರೇ ಹೆಚ್ಚಿನ ಬುದ್ಧಿ ಇರುವವರಾಗಿ ಪ್ರಜೆಗಳ ಲೆಕ್ಕದಲ್ಲಿ ಕಾಣಿಸತೊಡಗಿದರು. ಪ್ರಜೆಗಳು ಬ್ರಾಹ್ಮಣರಿಗಿಂತ ವೈಶ್ಯರನ್ನು ಹೆಚ್ಚಿನವರಾಗಿ ಲೆಕ್ಕಿಸುವುದು ಸ್ವಲ್ಪವೂ ಸರಿಹೋಗದ ಭೂಸುರರಾದ ಬ್ರಾಹ್ಮಣರು, ತಮ್ಮ ಆಧಿಕಾರವನ್ನು ನಿರೂಪಿಸಿ ಕೊಳ್ಳುವುದಕ್ಕೆ ಪ್ರಜೆಗಳಿಂದ ಪಾದ ನಮಸ್ಕಾರವನ್ನು ಮಾಡಿಸಿಕೊಳ್ಳುತ್ತಿದ್ದರು. ಅಗಲೂ ಪುರೋಹಿತರು ಭೂಸುರರಾಗಿ ಲೆಕ್ಕಿಸಲಾಗದಿದ್ದಾಗ, ವರ್ತಕರನ್ನು ಮಾತ್ರ ಪ್ರಜೆಗಳು ಶ್ರೇಷ್ಠರೆಂದು ಕರೆಯುತ್ತಿದ್ದರು. ಆದರೇ ವೈಶ್ಯರು ಎನ್ನಲಾದ ಚಂದ್ರವಂಶದ ವರ್ತಕರನ್ನು ದುರದೃಷ್ಟ ಹಿಂಬಾಲಿಸಿದಾಗ ವಾರ್ತಕನು ಎನ್ನುವ ಹೆಸರು ಹೋಗಿ ವರ್ತಕನು ಆಗಿದೆ. ನಂತರ "ಶ್ರೇಷ್ಠಿ ಎಂಬ ಹೆಸರು ಹೋಗಿ "ಶೆಟ್ಟಿ" ಆಗಿದೆ. ಇಂದಿಗೂ ವೈಶ್ಯರನ್ನು ಬಹಳ ಜನ ಪ್ರಜೆಗಳು ಶೆಟ್ಟಿಯವರು ಎಂದು ಹೇಳುವುದನ್ನು ಕೇಳುತ್ತಲೇ ಇದ್ದೇವೆ. ಬ್ರಾಹ್ಮಣರು ತಮಗೆ ಇಟ್ಟುಕೊಂಡಿರುವ ಹೆಸರು ಬದಲಾಗದಿದ್ದರೂ, ವೈಶ್ಯರು ಹೇಳುತ್ತಿರುವ ಹೆಸರು

ಮಾತ್ರ ಬದಲಾಗಿಹೋಗುತ್ತಿದೆ. ಶ್ರೇಷ್ಠಿಗೆ ಅರ್ಥವಿದೆ ಆದರೆ ಶೆಟ್ಟಿಗೆ ಯಾವುದೇ ಅರ್ಥವಿಲ್ಲ. ವೈಶ್ಯರು ಇಟ್ಟುಕೊಂಡ ಹೆಸರುಗಳಲ್ಲಿ ಎಲ್ಲಾ ಹೆಸರುಗಳು ಬದಲಾಗಿ ಹೋಗಿವೆ. ಬ್ರಾಹ್ಮಣರು ಇಟ್ಟುಕೊಂಡಿರುವ ಹೆಸರುಗಳು ಬದಲಾಗದಂತೆ ಹಾಗೆ ಇದ್ದರೂ, ವೈಶ್ಯರ ಹೆಸರುಗಳು ಮಾತ್ರ ಕಾಲಕ್ರಮದಲ್ಲಿ ಬಹಳ ಬದಲಾವಣೆಗಳು ನಡೆದಿವೆ.

ಪೂರ್ವವು ಸೂರ್ಯವಂಶದವರು ಒಂದು ಗುಂಪಾಗಿದ್ದು ಅವರೇ ಈದಿನ ಬ್ರಾಹ್ಮಣರಾಗಿ ಕರೆಯಲಾಗುತ್ತಿದ್ದಾರೆಂದು ಹೇಳಿದ್ದೇವಲ್ಲವೆ! ಮೊದಲು ಅವರಿಗೆ ಬ್ರಾಹ್ಮಣರೆನ್ನುವ ಹೆಸರು ಇಲ್ಲದಂತಿತ್ತು. ನಾವು ದೊಡ್ಡ ಜ್ಞಾನಿಗಳು ಎನ್ನುವುದಕ್ಕೆ ಬ್ರಹ್ಮಜ್ಞಾನಿಗಳು ಎಂದು ಸೂರ್ಯವಂಶದವರು ಹೆಸರು ಇಟ್ಟುಕೊಳ್ಳುವುದು ನಡೆದಿದೆ. ಬ್ರಹ್ಮ ಎಂದರೆ ದೊಡ್ಡದೆಂದು ಅರ್ಥ ವಿರುವುದರಿಂದ, ಒಂದುಬಾರಿ ಚಂದ್ರವಂಶದವರಿಗಿಂತ ತಾವು ದೊಡ್ಡವರೆನ್ನುವಂತೆ ಗುರುತಿಗಾಗಿ ಅವರು ಬ್ರಹ್ಮಜ್ಞಾನಿಗಳು ಎಂಬ ಹೆಸರನ್ನು ಇಟ್ಟುಕೊಂಡು, ನಾವು ದೊಡ್ಡ ಜ್ಞಾನಿಗಳೆಂದು ಹೊರಗೆ ತಿಳಿಯುವಂತೆ ಮಾಡಿದ್ದಾರೆ. ಅಲ್ಲಿಯವರೆಗು ವಾರ್ತಕರೆಂದು ಒಂದು ಬಾರಿ, ಶ್ರೇಷ್ಠರೆಂದು ಮತ್ತೊಂದುಬಾರಿ ಪ್ರಕಟಿಸಿಕೊಂಡ ಚಂದ್ರವಂಶ ಬೋಧಕರು, ಮೂರನೆಯಬಾರಿ ಸೂರ್ಯವಂಶದವರು ಮಾಡಿದ ಪ್ರಯೋಗಕ್ಕೆ ನೇರವಾಗಿ, ತಾವೂ ಸಹ ಸ್ವಲ್ಪ ಹೆಸರು ಬದಲಾಯಿಸಿ ಅವರಿಗಿಂತ ದೊಡ್ಡದಾಗಿ ಕಾಣಿಸಬೇಕೆಂದು ಅಂದುಕೊಂಡಿದ್ದಾರೆ. ಹೀಗೆ ಒಂದು ರೀತಿ ಯುದ್ಧದ ಹಾಗೆ ನಡೆಯುವ ಈ ಕಾರ್ಯಕ್ರಮಗಳಲ್ಲಿ ತಾವು ಸೂರ್ಯವಂಶ ದವರೆಂದು ಇವರೂ, ತಾವು ಚಂದ್ರವಂಶದರೆಂದು ಅವರೂ ಪೂರ್ತಿ ಮರೆತುಹೋಗಿ, ಆಗ ಪ್ರಕಟಿಸಿಕೊಂಡ ಹೆಸರುಗಳನ್ನೇ ಮುಖ್ಯವಾಗಿ ಹೇಳಿಕೊಳ್ಳುತ್ತಿದ್ದರು. ಒಂದು ಬಾರಿ ದೊಡ್ಡ ಅರ್ಥವಿರುವ ಹೆಸರನ್ನು ಅವರು ಪ್ರಕಟಿಸಿಕೊಂಡರೇ ಅದೇ ಹೆಸರಿಂದಲೇ ಸಾವಿರ ಅಥವಾ ಎರಡು ಸಾವಿರ ಸಂವತ್ಸರಗಳು ಚಲಾವಣೆ ಆಗುತ್ತಿದ್ದರು. ನಂತರ ಒಬ್ಬರಿಗಿಂತ ಮತ್ತೊಬ್ಬರು ಮುಂದಕ್ಕೆ ಹೋಗಬೇಕೆನ್ನುವ ಉದ್ದೇಶದಿಂದ ತಮ್ಮ ಹೆಸರುಗಳನ್ನು ಇನ್ನೂ

ದೊಡ್ಡ ಅರ್ಥದಿಂದ ಹೇಳಿಕೊಳ್ಳುತ್ತಿದ್ದರು. ಅ ಪ್ರಯತ್ನದಲ್ಲಿ ಈದಿನ ಬ್ರಾಹ್ಮಣರು ಎನ್ನುವವರೇ ಮೊದಲ ಪ್ರಯತ್ನವನ್ನು ಮಾಡಿದಾಗ, ನಂತರ ವೈಶ್ಯರಾಗಿ ಹೇಳಲಾಗುವವರು ಅವರಿಗೆ ನೇರವಾಗಿ ಸ್ಪಂದಿಸುತ್ತಾ, ಅವರೂ ಸಹ ತಕ್ಕ ಹೆಸರನ್ನು ತಗುಲಿಸುಕೊಳ್ಳುತ್ತಿದ್ದರು. ಮೂರನೆಯ ಬಾರಿ ಬ್ರಹ್ಮಜ್ಞಾನಿಗಳು ಎಂದು ಸೂರ್ಯವಂಶದವರು ಇಟ್ಟುಕೊಂಡರೆ ಚಂದ್ರವಂಶದವರು ನಾವು ಅವರಿಗಿಂತ ಕಡಿಮೆ ಅಲ್ಲ ಎನ್ನುವಂತೆ "ಗುಪ್ತ ಜ್ಞಾನಿಗಳು" ಎಂದು ಹೇಳಿಕೊಳ್ಳುವುದು ನಡೆದಿದೆ. ಅವರು ಆ ವಿಧವಾದ ಹೆಸರು ಇಟ್ಟುಕೊಳ್ಳುವುದಕ್ಕೆ ಕಾರಣವೇನೆಂದರೇ?

ದೇವರು ಎಂದರೆ ಯಾರಿಗೂ ತಿಳಿಯದವನು ಎಂದು ಹೇಳಬಹುದು. ಅದನ್ನೇ "ಶೋಧಿಸಬೇಕಾದವನು ದೇವರು" ಎಂದು ಸಹ ಹೇಳಿದ್ದಾರೆ. ಶೋಧಿಸುವುದು ಎಂದರೆ ಹುಡುಕುವುದು ಎಂದು ಅರ್ಥ. ಹುಡುಕಿದರೂ ಸಿಗದೆ ರಹಸ್ಯವಾದವನು ದೇವರು ಎಂದು ನಾವು ಆಧ್ಯಾತ್ಮಿಕ ಗ್ರಂಥಗಳಿಂದ ತಿಳಿದುಕೊಂಡಿದ್ದೇವೆ. ರಹಸ್ಯವನ್ನು ಗುಹ್ಯವು ಎಂದು ಸಹ ಅನ್ನಬಹುದು, ದೇವರು ಗುಹ್ಯವಾದವನು, ಆತನ ಜ್ಞಾನ ಗುಹ್ಯವಾದುದು, ಆದ್ದರಿಂದ ಭಗವದ್ಗೀತೆಯಲ್ಲಿ ದೇವರ ಜ್ಞಾನವನ್ನು ಕುರಿತು ರಹಸ್ಯಗಳಿಗೆಲ್ಲ ದೊಡ್ಡ ರಹಸ್ಯವಾಗಿರುವುದು ಎಂದು ಹೇಳುತ್ತಾ "ರಾಜಗುಹ್ಯ" ಎಂದು ಹೇಳಿದ್ದಾರೆ. ರಾಜ ಎಂದರೆ ಎಲ್ಲದಕ್ಕಿಂತ ದೊಡ್ಡ ಎಂದೂ, ರಾಜಗುಹ್ಯ ಎಂದರೇ ದೊಡ್ಡ ರಹಸ್ಯವಾಗಿರುವುದೆಂದು ಹೇಳಿದ್ದಾರೆ. ಪ್ರಪಂಚದಲ್ಲಿ ದೊಡ್ಡ ರಹಸ್ಯ ದೇವರು, ದೇವರ ಜ್ಞಾನ ಹೊರತು ಏನೂ ಇಲ್ಲ. ಆದ್ದರಿಂದ ನಾವು ಗುಪ್ತ ಜ್ಞಾನಿಗಳೆಂದು ಚಂದ್ರವಂಶ ಬೋಧಕರು ಹೇಳಿಕೊಳ್ಳುವುದು ನಡೆದಿದೆ. ಬ್ರಹ್ಮ ಜ್ಞಾನಿಗಳು (ದೊಡ್ಡ ಜ್ಞಾನಿಗಳು) ಎಂದು ಇಂದಿನ ಬ್ರಾಹ್ಮಣರಾಗಿ ಇರುವವರು ಆದಿನ ತಾವೇ ದೊಡ್ಡವರೆಂದು ಅವರ ಹೆಸರನ್ನು ಪ್ರಕಟಿಸಿಕೊಂಡಾಗ, ಅದಕ್ಕೆ ನೇರವಾಗಿ ಸ್ಪಂದಿಸಿದ ಇಂದಿನ ವೈಶ್ಯರಾಗಿ ಇರುವವರು ಆದಿನ ಗುಪ್ತಜ್ಞಾನಿಗಳು ಎಂದು ಹೇಳಿಕೊಂಡರು. ಅದರಿಂದ ಎರಡೂ ಕಡೆ ಬೋಧಕರಿಗೂ ಒಬ್ಬೊಬ್ಬರಿಗೆ ಮೂರು ಹೆಸರುಗಳು ಬಂದು ಸೇರಿಹೋಗಿವೆ. ಸೂರ್ಯವಂಶ ಬೋಧಕರು

ಪೌರೋಹಿತರು, ಭೂಸುರರು, ಬ್ರಹ್ಮಜ್ಞಾನಿಗಳು ಎನ್ನುವ ಮೂರು ಹೆಸರುಗಳಿಂದ ಚಲಾವಣೆ ಆಗುತ್ತಿದ್ದರು. ಚಂದ್ರವಂಶದ ಬೋಧಕರೂ ಸಹ ಎದುರಿಗೆ ಇರುವವರಿಗೆ ಸಾಟಿಯಾಗಿ ವಾರ್ತಕರು, ಶ್ರೇಷ್ಠರು, ಗುಪ್ತಜ್ಞಾನಿಗಳು ಎಂಬ ಹೆಸರಿನಿಂದ ಚಲಾವಣೆ ಆಗುತ್ತಿದ್ದರು. ಈ ರೀತಿ ಅವರು ಮೂರು ಹೆಸರುಗಳಿಂದ ದೊಡ್ಡ ಜ್ಞಾನವನ್ನು ತಿಳಿಸುವವರಾಗಿ ಪ್ರಕಟಿಸಿಕೊಂಡ ನಂತರ, ಅವರಲ್ಲಿ ಜ್ಞಾನವನ್ನು ಬೋಧಿಸುವುದು ಕಡಿಮೆಯಾಗಿ ಹೋಗಿದೆ. ಕೊನೆಗೆ ಅವರ ಹೆಸರುಗಳಿಗೆ ಅವರೇ ಅರ್ಥ ತಿಳಿಯದ ಸ್ಥಿತಿಯೊಳಗೆ ಹೋಗಿದ್ದಾರೆ. ಸೂರ್ಯವಂಶ, ಚಂದ್ರವಂಶ ಎನ್ನುವ ಮಾತುಗಳನ್ನು ಅವರು ಮೊದಲೇ ಮರೆತುಹೋಗಿದ್ದಾರೆ.

ಪ್ರಜೆಗಳಿಗೆ ಜ್ಞಾನವನ್ನು ಹೇಳುವುದು ನಮ್ಮ ಕೆಲಸವೆಂದೂ ತಿಳಿಯದಂತೆ ಹೋಗುವ ಸ್ಥಿತಿಗೆ ಹತ್ತಿರವಾಗಿರುವ ಸಮಯದಲ್ಲಿ ಚಂದ್ರವಂಶದ ವೈಶ್ಯರಲ್ಲಿ ಸೂರ್ಯವಂಶದವರಿಗೆ ನಾವು ಎದುರಾಳಿಯಾಗಿ ಇದ್ದೇವೆಂಬ ಜ್ಞಾಪಕ ಸ್ವಲ್ಪ ಇರುತ್ತಿತ್ತು. ಬ್ರಾಹ್ಮಣರಾಗಿ ಇರುವವರು ಬೋಧನೆಗಳು ಹೇಳುವುದು ಪೂರ್ತಿ ಬಿಟ್ಟುಕೊಂಡವರಾಗಿ ಮೊದಲು ತಮ್ಮ ಕೆಲಸ ಇದು ಇರುತ್ತಿತ್ತೆಂದು ಸಹ ತಿಳಿಯದಂತೆ ಹೋಗಿದ್ದಾರೆ. ಕೊನೆಯಲ್ಲಿ ಅಷ್ಟೋ ಇಷ್ಟೋ ಜ್ಞಾಪಕವಿದ್ದು ಬ್ರಾಹ್ಮಣರಿಗಿಂತ ತಾವು ಇನ್ನೂ ದೊಡ್ಡವರೆಂದೆನಿಕೊಳ್ಳಬೇಕೆಂದುಕೊಂಡವರು ವೈಶ್ಯರೇ. “ವೈಶ್ಯರು” ಎಂಬ ಹೆಸರು ಮಧ್ಯದಲ್ಲಿ ಇತರರು ಇಟ್ಟಿರುವ ಹೆಸರೇ ಹೊರತು ಅದು ಅವರು ಇಟ್ಟುಕೊಂಡಿರುವ ಹೆಸರು ಅಲ್ಲ. ಎರಡೂ ಕಡೆ ಬೋಧಕರು ಕೊನೆಯಲ್ಲಿ ತಮಗೆ ತಾವು ಇಟ್ಟುಕೊಂಡ ಹೆಸರುಗಳು, ಬ್ರಹ್ಮಜ್ಞಾನಿಗಳು ಎಂದು ಒಂದು ಗುಂಪಿನವರು, ಗುಪ್ತ ಜ್ಞಾನಿಗಳು ಎಂದು ಮತ್ತೊಂದು ಕಡೆಯವರು ಅಂದುಕೊಳ್ಳುವುದು ನಡೆದಿದೆ. ಆದರೇ ಸ್ವಲ್ಪ ಕಾಲಕ್ಕೆ ಅಂದರೆ ಕೆಲವು ಸಾವಿರ ವರ್ಷಗಳಿಗೆ ಅವರ ಕೊನೆಯ ಹೆಸರುಗಳಲ್ಲಿ ಸ್ವಲ್ಪ ಬದಲಾವಣೆ ಬಂದಿದೆ. “ಬ್ರಹ್ಮಜ್ಞಾನಿಗಳು” ಎನ್ನುವ ಹೆಸರು ಕೊನೆಗೆ ಬ್ರಾಹ್ಮಣ ಎಂದು ಬದಲಾಗಿದೆ. “ಗುಪ್ತಜ್ಞಾನಿಗಳು” ಎನ್ನುವ ಹೆಸರು ಗುಪ್ತ ಎಂದು

ಹೇಳಲಾಗಿದೆ. ಎರಡು ಹೆಸರುಗಳು ಬ್ರಾಹ್ಮಣರು, ಗುಪ್ತರು ಎಂದು ಕರೆಯಲಾಗಿರುವಾಗ ಮೊದಲು ತಮಗೆ ಆ ಹೆಸರು ಏಕೆ ಬಂದಿದೆ? ಎಂದು ಯೋಚಿಸಲಾರದ ಸ್ಥಿತಿಯಲ್ಲಿ ಎರಡೂ ಕಡೆಯವರು ಉಳಿದುಕೊಂಡಿದ್ದಾರೆ. ಇದು ಇಂದಿನ ಪರಿಸ್ಥಿತಿಯಾದಾಗ ಪೂರ್ವದಲ್ಲಿ ಬ್ರಾಹ್ಮಣರು ತಮಗೂ ವೈಶ್ಯರಿಗೂ ಮಧ್ಯದಲ್ಲಿ ಅಧಿಕಾರ ಹೋರಾಟ ಇದೆಯೆನ್ನುವ ಮಾತನ್ನು ಮರೆತುಹೋಗಿದ್ದಾರೆ. ಆದರೇ ಕೊನೆಯದಾಗಿ ವೈಶ್ಯರಿಗೆ ಇನ್ನೂ ಆ ಜ್ಞಾಪಕ ಇರುವುದರಿಂದ ಕೊನೆಗೆ ತಾವೇ ಮುನ್ನೆಜ್ಜೆ ಹಾಕಿ ತಮ್ಮ ಹೆಸರು ಶಾಶ್ವತವಾಗಿ ಬ್ರಾಹ್ಮಣರಿಗಿಂತ ದೊಡ್ಡದಾಗಿರುವಹಾಗೆ, ಅವರಿಗಿಂತ ಜ್ಞಾನದಲ್ಲಿ ತಾವೇ ದೊಡ್ಡದಾಗಿ ಇದ್ದೇವೆನ್ನುವಹಾಗೆ, ತಮ್ಮ ಹೆಸರನ್ನು ಮತ್ತೊಂದು ಬಾರಿ ಜ್ಞಾನದಿಂದ ಸಂಧಾನಮಾಡಿಕೊಂಡು ಹೇಳಿಕೊಂಡಿದ್ದಾರೆ. ಪ್ರತಿಯೊಂದು ಬಾರಿ ಮೊದಲು ಬ್ರಾಹ್ಮಣರು ತಮ್ಮ ಹೆಸರನ್ನು ಹೊಸದಾಗಿ ಹೇಳಿಕೊಂಡರೆ ನಂತರ ಅದಕ್ಕೆ ಸರಿಯಾಗಿ ವೈಶ್ಯರು ತಮ್ಮ ಹೆಸರನ್ನು ಬದಲಾಯಿಸಿ ಹೇಳುತ್ತಿದ್ದರು. ಆದರೇ ಕೊನೆಯಲ್ಲಿ ಬ್ರಾಹ್ಮಣರು ತಮ್ಮ ದೃಷ್ಟಿಯನ್ನು ಬೋಧನೆಗಳ ಕಡೆಯಿಂದ ಮರಳಿಸಿ ಪ್ರಪಂಚ ಧನಾಪೇಕ್ಷದಲ್ಲಿ ಮುಳುಗಿದಾಗ, ಕೊನೆಯಲ್ಲಿ ವೈಶ್ಯರು ಮಾತ್ರ ಸ್ವಲ್ಪ ಹಳೆಯ ಸ್ಪೃಹವನ್ನು ಹೊಂದಿದ್ದೂ ಕೊನೆಯಲ್ಲಿ ತಾವು ಎರಡು ಹೆಸರುಗಳನ್ನು ಬದಲಾಯಿಸಿಕೊಳ್ಳುವುದು ನಡೆದಿದೆ.

ಬದಲಾಯಿಸಿಕೊಳ್ಳುವುದು ಎಂದರೆ ಮೊದಲಿರುವ ಹೆಸರನ್ನು ಪೂರ್ತಿಯಾಗಿ ತೆಗೆದುಹಾಕಿ ಹೊಸ ಹೆಸರನ್ನು ಇಟ್ಟುಕೊಳ್ಳುವುದಲ್ಲ. ಮೊದಲಿರುವ ಹೆಸರನ್ನು ಹಾಗೇ ಇಟ್ಟುಕೊಂಡು ಜ್ಞಾನದಲ್ಲಿ ದೊಡ್ಡ ಭಾವವಿರುವ ಹೆಸರನ್ನು ಇಟ್ಟುಕೊಳ್ಳುವುದೆಂದು ತಿಳಿಯಬೇಕು. ಆ ರೀತಿ ಬ್ರಾಹ್ಮಣರು ಮೂರು ಹೆಸರುಗಳನ್ನು ಹೊಂದಿರುವಾಗ, ವೈಶ್ಯರು ಐದು ಹೆಸರುಗಳನ್ನು ಹೊಂದಿದ್ದಾರೆ. ಐದು ಹೆಸರುಗಳು ದೈವಜ್ಞಾನದಿಂದ ಕೂಡಿಕೊಂಡಿರುವುದು ವಿಶೇಷ. ಬ್ರಾಹ್ಮಣರು ಕೂಡಾ ತಮಗೆ ತಾವು ಇಟ್ಟುಕೊಂಡಿರುವ ಮೂರು ಹೆಸರುಗಳನ್ನು ಜ್ಞಾನ ಸಂಬಂಧದಿಂದ ಇಟ್ಟುಕೊಂಡಾಗ, ಕೊನೆಗೆ ಅವುಗಳ ಅರ್ಥವನ್ನು ಅವರು,

ಇವರು ಇಬ್ಬರೂ ಮರೆತುಹೋಗಿದ್ದಾರೆ. ವೈಶ್ಯರು, ಬ್ರಾಹ್ಮಣರಿಗಿಂತ ಬುದ್ಧಿವಂತರೆನ್ನುವುದಕ್ಕೆ ಗುರುತಿಗಾಗಿ ವೈಶ್ಯರು ಐದು ಹೆಸರುಗಳನ್ನು ಬಿರುದುಗಳಾಗಿ ಹೊಂದಿದ್ದಾರೆ. ಅಂತಹ ಹೆಸರುಗಳಲ್ಲಿ ನಾಲ್ಕನೇ ಹೆಸರು **"ಕೋಮುಟ"**, ಐದನೇ ಹೆಸರು **"ವ್ಯಾಪರಿ". ಈ** ಎರಡು ಹೆಸರುಗಳಲ್ಲಿ ನಾಲ್ಕನೇ ಹೆಸರಾದ ಕೋಮುಟದಲ್ಲಿ ದೈವಜ್ಞಾನ ಏನಿದೆಯೋ ಸ್ವಲ್ಪ ವಿವರಿಸಿಕೊಂಡು ಹೇಳಿಕೊಳ್ಳೋಣ. ಈ ಹೆಸರನ್ನು ವೈಶ್ಯರು ಇಟ್ಟುಕೊಳ್ಳುವುದರಿಂದ ಬ್ರಾಹ್ಮಣರಿಗಿಂತ ಮಿರಿದ ಜ್ಞಾನಿಗಳು ವೈಶ್ಯರೆಂದೇ ತಿಳಿದುಹೋಗುತ್ತಿದೆ.

ದೇವರು ಭಗವದ್ಗೀತೆಯಲ್ಲಿ ಹೇಳಿದಂತೆ, ಬೈಬಲ್ ಮತ್ತು ಖುರ್‌ಆನ್‌ನಲ್ಲಿ ಹೇಳಿದಂತೆ ಮೂರು ಆತ್ಮಗಳ ರೂಪದಲ್ಲಿ ಇದ್ದಾನೆ. ಭಗವದ್ಗೀತೆಯಲ್ಲಿ **ಕ್ಷರನು, ಅಕ್ಷರನು, ಪುರುಷೋತ್ತಮನೆಂದು** ಮೂರು ವಿಧಗಳಲ್ಲಿ ಪುರುಷೋತ್ತಮಪ್ರಾಪ್ತಿ ಯೋಗದಲ್ಲಿ ಹೇಳಿರುವಾಗ, ಖುರ್‌ಆನ್ ಗ್ರಂಥದಲ್ಲಿ ಸೂರಾ 50, ಆಯತ್ 21 ರಲ್ಲಿ **ನಡೆಯುವವನು, ನಡೆಸುವವನು, ಸಾಕ್ಷಿಯಾಗಿ ನೋಡುವವನು** ಎಂದು ಮೂರು ವಿಧಗಳಾಗಿ ಹೇಳಿದ್ದಾನೆ, ಹಾಗೇ ಬೈಬಲ್ ಗ್ರಂಥದಲ್ಲಿ ಮತ್ತಯಿ ಸುವಾರ್ತೆ 28 ನೇ ಅಧ್ಯಾಯದಲ್ಲಿ, 19ನೇ ವಾಕ್ಯದಲ್ಲಿ **ತಂದೆ, ಕುಮಾರನು, ಪರಿಶುದ್ಧಾತ್ಮ ಎಂದು** ಮೂವರಾಗಿ ಹೇಳಿದ್ದಾನೆ. ಮೂರು ದೈವ ಗ್ರಂಥಗಳಲ್ಲಿ ದೇವರು ಮೂರು ಭಾಗಗಳಾಗಿ ಇದ್ದಾನೆಂದು ಹೇಳಲಾಗಿದೆ. ದೇವರು ಹೇಳಿದ ಜ್ಞಾನದಲ್ಲಿ ದೇವರು ಈ ರೀತಿ ಇದ್ದಾನೆಂದು ತಿಳಿಸಿದಹಾಗೆ, ವೈಶ್ಯರು ಕೂಡಾ ತಮ್ಮ ಹೆಸರನ್ನು ದೇವರಿಗೆ ಹತ್ತಿರವಾಗಿರುವ ಅರ್ಥದಿಂದ "ಕೋಮುಟ" ಎಂದು ಹೇಳಿಕೊಂಡಿದ್ದಾರೆ. "ಕೋಮುಟ" ಎನ್ನುವ ಮೂರು ಅಕ್ಷರಗಳು ಪ್ರತ್ಯೇಕತೆ ಹೊಂದಿದ್ದು, ಭಗವದ್ಗೀತೆಯಲ್ಲಿ ದೇವರು ಹೇಳಿದಂತೆ ಮೂರು ಆತ್ಮಗಳಿಗೆ ಗುರುತಾಗಿ ಇವೆ. "ಕೋ" ಎಂದರೆ ಜೀವಾತ್ಮಕ್ಕೆ ಗುರುತೆಂದು, "ಮು" ಎಂದರೆ ಆತ್ಮಕ್ಕೆ ಗುರುತೆಂದು, "ಟ" ಎಂದರೆ ಪರಮಾತ್ಮಕ್ಕೆ ಗುರುತೆಂದು ಹೇಳಬಹುದು. ಅಷ್ಟೇ ಅಲ್ಲದೆ ಜೀವಿಯು ಆಡುತ್ತಿರುವಾಗ, ಆಡಿಸುವವನು ಆತ್ಮನಾಗಿರುವುದರಿಂದ, ಆ ಎರಡು ಆತ್ಮಗಳನ್ನು ಪ್ರತ್ಯೇಕಿಸಿ ಹೇಳುವ ಎರಡು

ಅಕ್ಷರಗಳಿಂದ "ಕೋ" ಎಂದು "ಮ" ಎಂದು ಹೇಳಲಾಗಿದೆ. "ಕ" ಎನ್ನುವ ಅಕ್ಷರಕ್ಕೆ ಓತ್ವವು ಸೇರಿಸಿದರೆ "ಕೋ" ಆಗಿದೆ. ಹಾಗೇ "ಮ" ಎನ್ನುವ ಅಕ್ಷರಕ್ಕೆ ಪಕ್ಕದಲ್ಲಿ ಕೊಂಬನ್ನು ಸೇರಿಸಿದರೆ "ಮು" ಆಗಿದೆ. ಕೊನೆಯಲ್ಲಿರುವ ಅಕ್ಷರ ಏನೂ ಸೇರದೆ ಇರುವ "ಟ" ಅಕ್ಷರವಾಗಿ ಇದೆ. ಓತ್ವವೂ, ಕೊಂಬು ಸೇರಿದ ಎರಡು ಅಕ್ಷರಗಳಲ್ಲಿ "ಕೋ" ಜೀವಾತ್ಮಕ್ಕೆ ಗುರುತೆಂದು, "ಮು" ಆತ್ಮಕ್ಕೆ ಗುರುತೆಂದು ಹೇಳಿಕೊಂಡಿದ್ದೇವೆ. ಜೀವಿಯು ಆತ್ಮ ಎರಡೂ ಅವಿನಾಭಾವ ಸಂಬಂಧವನ್ನು ಹೊಂದಿ, ಒಂದು ಆಡಿಸುತ್ತಿರುವಾಗ ಮತ್ತೊಂದು ಆಡುತ್ತಿದೆ. ಆದ್ದರಿಂದ ಆ ಎರಡು ಆತ್ಮಗ್ಗಳಿಗೆ ಗುರುತಾಗಿ ಕೊಂಬು ಸೇರಿದೆ, ಓತ್ವವು ಸೇರಿರುವುದಾದ "ಕೋ", "ಮು"ಅನ್ನು ಗುರುತಾಗಿ ಹೇಳಲಾಗಿದೆ.

ಪರಮಾತ್ಮ ಎನ್ನುವ ದೇವರು ಏನೂ ಮಾಡದೇ ಶರೀರದಲ್ಲಿ ಸಾಕ್ಷಿಯಾಗಿ ನೋಡುತ್ತಾ ಸುಮ್ಮನಿರುವುದರಿಂದ ಆತನಿಗೆ ಕೊಂಬಾಗಲೀ, ದೀರ್ಘವಾಗಲಿ, ಓತ್ವವಾಗಲೀ ಇಲ್ಲದ ಏಕಾಕ್ಷರವಾದ "ಟ"ನ್ನು ದೇವರಿಗೆ ಗುರುತಾಗಿ ಇಡಲಾಗಿದೆ. ಜೀವಾತ್ಮ, ಆತ್ಮ, ಪರಮಾತ್ಮ ಎನ್ನುವ ಭಗವದ್ಗೀತೆಯಲ್ಲಿ ಪುರುಷೋತ್ತಮ ಪ್ರಾಪ್ತಿ ಯೋಗದಲ್ಲಿರುವ ಮಾತನ್ನು ತೋರಿಸುವ ಹಾಗೆ, ನೆನಪು ಮಾಡುವಂತೆ, "ಕೋಮುಟ" ಎಂದು ತಮ್ಮನ್ನು ತಾವು ಹೇಳಿಕೊಂಡಿದ್ದಾರೆ. "ಕೋಮುಟ ಎಂದರೆ ಮೂರು ಆತ್ಮಗ್ಗಳ ಜ್ಞಾನ ತಿಳಿದವರೆನ್ನುವ ಅರ್ಥ ಬರುತ್ತಿದೆ. ಅಷ್ಟು ದೊಡ್ಡ ಭಾವದಿಂದಿರುವ ಕೋಮುಟ ಎನ್ನುವ ಪದದಲ್ಲಿ ಮತ್ತೊಂದು ರಹಸ್ಯ ಅಡಗಿರುವ ಹಾಗೆ ತಿಳಿಯುತ್ತಿದೆ. ಆ ರಹಸ್ಯ ಏನೆಂದರೆ! ದೇವರು ಮೂರು ಆತ್ಮಗಳಾಗಿ ಇದ್ದಾನೆನ್ನುವ ವಿಷಯ ಪ್ರತಿ ಒಬ್ಬರೂ ಗ್ರಹಿಸುವಹಾಗೆ, ತಮ್ಮ ಹೆಸರಲ್ಲಿ ಕಾಣಿಸದ ರಹಸ್ಯವನ್ನು ಕೂಡಾ ಇಟ್ಟಿದ್ದಾರೆ. ಆ ಕಾಣಿಸದ ರಹಸ್ಯ ಸ್ವಲ್ಪ ಶ್ರದ್ಧೆ ಇರುವವರಿಗೇ ತಿಳಿಯುವಹಾಗೆ ಅದರಲ್ಲಿ ಆ ಮೂರು ಅಕ್ಷರಗಳಲ್ಲಿ ಇರುವಂತೆ ಮಾಡಿದ್ದಾರೆ.

ಮೂರು ಅಕ್ಷರಗಳಲ್ಲಿ ಕಾಣಿಸದೆ ಅಡಗಿರುವ ಮೂರು ಆತ್ಮಗ್ಗಳ ವಿವರ ಹೀಗೆ ಇದೆ. 'ಕೋ' ಎನ್ನುವ ಅಕ್ಷರದಲ್ಲಿ ಮೂರು ತುದಿಗಳು ಇವೆ.

ಆ ಮೂರು ಕೊನೆಗಳನ್ನು ಮೂರು ಆತ್ಮಗಳ ಗುರುತಾಗಿ ಹೇಳಬಹುದು. ನಂತರ ಪುಟದಲ್ಲಿರುವ ದೊಡ್ಡ ಅಕ್ಷರಗಳಲ್ಲಿ ಮೂರು ತುದಿಗಳನ್ನು ನೋಡೋಣ.

**"ಕೋಮುಟ"** ಎನ್ನುವ ಮೂರು ಅಕ್ಷರಗಳು ಮೂರಾತ್ಮಗಳ ಗುರುತಾದಾಗ, ಅದರಲ್ಲಿನ ಪ್ರತಿ ಅಕ್ಷರ ಮೂರು ಆತ್ಮಗಳನ್ನು ತಿಳಿಸುವಹಾಗೆ ಮೂರು ಕೊನೆಗಳನ್ನು ಹೊಂದಿವೆ. ಪ್ರತಿ ಅಕ್ಷರ ಮೂರು ಕೊನೆಗಳಿಂದ ಮೂರು ಆತ್ಮಗಳ ಜ್ಞಾಪಕ ಮಾಡುವ ಉತ್ತಮ ಪದವನ್ನು, ಎಷ್ಟೋ ಜ್ಞಾನ ರಹಸ್ಯದಿಂದ ಕೂಡಿರುವ ಮೂರಕ್ಷರಗಳ ಪದವನ್ನು, ಪೂರ್ವದಲ್ಲಿ ಚಂದ್ರವಂಶ ಬೋಧಕರು ತಮ್ಮ ಹೆಸರನ್ನಾಗಿ ಇಟ್ಟುಕೊಂಡಾಗ, ಕಾಲ ಕ್ರಮೇಣ ಆ ಪದದಲ್ಲಿಯೂ ಸ್ವಲ್ಪ ಬದಲಾವಣೆ ಬಂದು ಈದಿನ ಆ ಪದ 'ಕೋಮಟಿ' ಎನ್ನುವ ಹೆಸರಿಂದ ಕರೆಯಲಾಗುತ್ತಿದೆ. ಕೋಮಟಿಯವರು ಎಂದು ಈದಿನ ಅವರನ್ನು ಸಂಬೋಧಿಸುವುದು ನಡೆಯುತ್ತಿದೆ. ಆದರೇ ಬದಲಾದ ಹೆಸರಲ್ಲಿ ಪೂರ್ತಿ ದೇವರ ಅರ್ಥ ಇಲ್ಲದಂತೆ ಹೋಗಿದೆ. ಎಷ್ಟೋ ಬೆಲೆ ಇರುವ ಹೆಸರು ಇಟ್ಟುಕೊಂಡಿರುವ ವೈಶ್ಯರು ಆದಿನಗಳಲ್ಲಿ ಇತರರಿಗೆ ದೇವರ ಜ್ಞಾನವನ್ನು ಬೋಧಿಸುವವರಾದರೂ ಈ ದಿನ ತಮ್ಮ ಜ್ಞಾನವನ್ನು ಮರೆತುಹೋಗಿದ್ದಾರೆ. ಕೊನೆಗೆ ತಾವು ಇಟ್ಟುಕೊಂಡಿರುವ ತಮ್ಮ ಹೆಸರುಗಳಿಗೇ ಅರ್ಥ ತಿಳಿಯದಂತೆ ಹೋಗಿದ್ದಾರೆ. ಕೊನೆಗೆ ಅವರ ಹೆಸರೇ ಅವರು ತಪ್ಪಾಗಿ ಹೇಳಿಕೊಳ್ಳುತ್ತಿದ್ದಾರೆ. ಈದಿನ ಕಳೆದುಹೋದ ಚರಿತ್ರೆಯಲ್ಲಿನ ದೊಡ್ಡ ರಹಸ್ಯಗಳಾದ ಅವರ ಹೆಸರುಗಳಿಗೆ ನಾವು ಅರ್ಥವನ್ನು ಹೇಳಿದರೂ ಗ್ರಹಿಸಿಕೊಳ್ಳದೇ, ನೀವು ಹೇಳುವುದು ನಿಜವೆಂದು ನಾವು ಹೇಗೆ ನಂಬಬೇಕು? ನಮ್ಮ ಜ್ಞಾನ ನಮಗೆ ತಿಳಿಯದೆಂದು ನೀವು ಅಂದಾಗ, ನಮ್ಮ ಜ್ಞಾನ ನಿಮಗೆ ಹೇಗೆ ತಿಳಿದಿದೆ? ನೀವು ಕಲ್ಪನೆ ಮಾಡಿ ಹೇಳುವ ಮಾತುಗಳನ್ನು ನಾವೇಕೆ ನಂಬಬೇಕು? ಎಂದು ಕೇಳಿದರೆ ಅದಕ್ಕೆ ನಾನು ಏನೂ ಹೇಳದೇ ಮೌನವಾಗಿ ಇರಬಲ್ಲೆನು. ನನ್ನ ಮಾತುಗಳನ್ನು ವಿಶ್ವಾಸಿಸುವವರಿಗೆ ಮಾತ್ರ ನಾನು ಹೇಳಿರುವುದು ನೂರಕ್ಕೆ ನೂರು ಪಾಲು ಸತ್ಯವಾದರೂ **"ನನ್ನ ಮಾತು ಸತ್ಯವೆಂದು ನೀವು ನಂಬಿ"** ಎಂದು ನಾನು ಯಾರಿಗೂ ಹೇಳುತ್ತಿಲ್ಲ.

ಕಾಲಗರ್ಭದಲ್ಲಿ ಎಷ್ಟೋ ವಿಷಯಗಳು ಕಣ್ಮರೆಯಾಗಿ ಹೋಗಿವೆ. ಕೆಲವು ವಿಷಯಗಳು ಮಾತ್ರ ಸ್ವಲ್ಪ ಗುರಿತಿಸುವುದಕ್ಕಾಗಿ, ಸ್ವಲ್ಪ ನಮೂನೆ ಗುರುತುಗಳಾಗಿ ನಿಂತುಹೋಗಿವೆ. ಅಂತಹ ನಮೂನೆ ಗುರುತುಗಳನ್ನು ನೋಡಿ ಹಿಂದಿನ ಕಾಲದಲ್ಲಿ ಏನು ನಡೆದಿದೆಯೋ ಸ್ವಲ್ಪಮಟ್ಟಿಗೆ ತಿಳಿಯಬಹುದು. ಇಲ್ಲಿಯವರೆಗು ನಾವು ಹೇಳಿದ ವಿಷಯಗಳನ್ನು ನಂಬದವರೂ ಸಹ ಇರಬಹುದು. ಆದರೇ ನಾವು ಈ ವಿಷಯಗಳನ್ನು ಕಲ್ಪನೆ ಮಾಡಿಕೊಂಡೋ, ಊಹಿಸಿಕೊಂಡು ಹೇಳುವುದೋ ಮಾಡಲಿಲ್ಲ. ಭೂತಕಾಲದಲ್ಲಿರುವ ಭೂತದ ಮೂಲಕ ನಾನು ತಿಳಿದಿರುವ ವಿಷಯಗಳನ್ನೇ ಹೇಳಿದ್ದೇವೆ. ಪ್ರಪಂಚದಲ್ಲಿ ಯಾರೂ **"ಭೂತಕಾಲವು ಚರಿತ್ರೆಯಲ್ಲಿನ ವಿಷಯಗಳನ್ನು ಹೇಳಿದೆ"** ಎನ್ನುವ ಮಾತನ್ನೇ ಹೇಳಲಿಲ್ಲ. ಭೂತಕಾಲದಲ್ಲಿನ ಭೂತ ಹೇಳುವುದೇನು? ಎಂದು ಕೆಲವರು ಆಶ್ಚರ್ಯವನ್ನು ವ್ಯಕ್ತ ಮಾಡಬಹುದು. ಗತದಲ್ಲಿ ನಾವು ರೋಗಗಳ ಭೂತಗಳಿಗೆ ಹೇಳಿರುವ ಮಾತುಗಳನ್ನು ಅವರು (ರೋಗಗಳು) ಕೇಳಿ ಇತರರ ಶರೀರದಲ್ಲಿ ಇಲ್ಲದಂತೆ ಹೋಗಿದ್ದಾರೆಂದು ಹೇಳಿದರೂ, ಅದು ಕೂಡಾ ನಂಬಲಾರದ ಮಾತಾಗಿಯೇ ಇರುತ್ತದೆ. ಲಕ್ಷಗಳು ಖರ್ಚು ಮಾಡಿದರೂ ವಾಸಿಯಾಗದ ರೋಗಗಳು, ಶರೀರವನ್ನು ಬಿಟ್ಟುಹೋಗದ ಕ್ಯಾನ್ಸರ್, ಎಯಿಡ್ಸ್ ಮೊದಲಾದ ರೋಗಗಳು ನಮ್ಮ ಮಾತನ್ನು ಗೌರವಿಸಿ ಹೇಳಿದಂತೆ ಕೇಳಿದಾಗ, ಕಾಲದಲ್ಲಿನ ಭೂತ ನನಗೆ ಏಕೆ ಗೌರವವನ್ನು ಕೊಡುವುದಿಲ್ಲ? ನನಗೆ ಗತ ಚರಿತ್ರೆಯನ್ನು ಏಕೆ ತಿಳಿಸುವುದಿಲ್ಲ? ದೇವರ ಜ್ಞಾನವನ್ನು ಶರೀರದಲ್ಲಿ ಜೀರ್ಣಿಸಿಕೊಂಡ ಯಾರಮಾತನ್ನಾಗಲೀ ಜ್ಞಾನವಿರುವ ಭೂತಗಳು ಗೌರವಿಸುತ್ತವೆ. ದೇವರ ಪರಿಪಾಲನೆಯಲ್ಲಿ ಭಾಗಸ್ವಾಮಿಗಳಾದ ಭೂತಗಳೆಲ್ಲವೂ ನೀನು ದೇವರ ಜ್ಞಾನವನ್ನು ತಿಳಿಯುವುದಾದರೇ ನಿನ್ನನ್ನೂ ಸಹ ಗೌರವಿಸುತ್ತವೆ, ನಿನ್ನ ಮಾತನ್ನೂ ಸಹ ಕೇಳುತ್ತವೆಂದು ಹೇಳುತ್ತಿದ್ದೇವೆ.

ತ್ರೇತಾಯುಗದಲ್ಲಿ ತ್ರಿಕಾಲ ಜ್ಞಾನಿ, ಅಪರಬ್ರಹ್ಮ ಆದ ರಾವಣಬ್ರಹ್ಮ ಎಷ್ಟೋ ಜ್ಞಾನ ಶಕ್ತಿ ಇರುವವನಾಗಿ ಕಾಲದಲ್ಲಿನ ದ್ವಾದಶ ಗ್ರಹಗಳನ್ನು ತನ್ನ

ಮಾತನ್ನು ಕೇಳುವಹಾಗೆ ಮಾಡಿಕೊಂಡಿದ್ದಾನೆ. ಆ ದಿನ ಆತನಲ್ಲಿರುವ ಜ್ಞಾನವನ್ನನುಸರಿಸಿ ಗ್ರಹಗಳು ಕೂಡಾ ಆತನ ಮಾತನ್ನು ಕೇಳಿವೆ. ಆಗಿನ ಕಾಲದಲ್ಲಿ ಜ್ಞಾನದಲ್ಲಿ ಜ್ಞಾನಶಕ್ತಿಯಲ್ಲಿ ದೊಡ್ಡದಾಗಿರುವ ಆತನು ಲಂಕಾನಗರವನ್ನು ರೋಗಗಳೆಲ್ಲವೂ ಬಿಟ್ಟು ಹೋಗುವಹಾಗೆ ಹೇಳಿದಾಗ, ಭೂತಗಳಾದ ರೋಗಗಳೆಲ್ಲವೂ ಲಂಕೇಶ್ವರನಾದ ರಾವಣಬ್ರಹ್ಮ ಮಾತನ್ನು ಗೌರವಿಸಿ ಲಂಕಾನಗರವನ್ನು ಬಿಟ್ಟು ಹೋಗುವುದು ನಡೆದಿದೆ. ಈ ಮಾತುಗಳನ್ನು ಹೇಳಿದರೇ ಅದು ನಡೆದುಹೋದ ಕಾಲ. ಆಗ ಅದು ನಡೆದಿದೆಯೋ, ಇಲ್ಲವೋ! ನಿಮ್ಮ ಮಾತನ್ನು ನಾವು ಹೇಗೆ ನಂಬಬೇಕು? ಎಂದು ಕೆಲವರು ಅನ್ನಬಹುದು. ಆಗ ನಡೆದಿರುವುದಕ್ಕೆ ಈಗ ಸಾಕ್ಷಿಯನ್ನು ತೋರಿಸಬೇಕೆಂದರೇ ನಮಗೂ ಕೂಡಾ ಕಷ್ಟವೇ. ಆದ್ದರಿಂದ ಜ್ಞಾನ ದೊಡ್ಡದೆಂದು ಹೇಳುವುದಕ್ಕೆ ಇಲ್ಲಿಯವರೆಗೂ ನಾವು ಯಾರಿಗೂ ಹೇಳದ ವಿಷಯಗಳನ್ನು ಹೇಳಬೇಕಾಗಿ ಬಂದಿದೆ. ರೋಗಗಳು ಭೂತಗಳೆಂದು ಹೇಳುವುದಕ್ಕೆ, **"ಭೂತಗಳು ಜ್ಞಾನಿಗಳ ಮಾತನ್ನು ಗೌರವಿಸುತ್ತವೆ"** ಎಂದು ಹೇಳುವುದಕ್ಕೆ ನಿಮಗೆ ಬೇಕಾದ ಸಾಕ್ಷಿ ನಾವೇ ಎಂದೂ, ನಮ್ಮ ಮೂಲಕ ರೋಗಗಳಿಂದ ಹೊರಬಿದ್ದ ನೂರಾರು ಜನ ಮನುಷ್ಯರು ಸಾಕ್ಷಿಯೆಂದು ಹೇಳುತ್ತಿದ್ದೇವೆ. ಇನ್ನೂ ಹೇಳಬೇಕೆಂದರೆ ನಮ್ಮಿಂದ ಬರೆಯಲಾಗಿರುವ ಗ್ರಂಥಗಳೇ ಜ್ಞಾನಶಕ್ತಿಗೂ, ಭೂತಗಳ ಗೌರವಕ್ಕೂ ಸಾಕ್ಷಿಯೆಂದು ಹೇಳುತ್ತಿದ್ದೇವೆ. ನಮ್ಮಿಂದ ಬರೆಯಲಾಗಿರುವ ಯಾವ ಗ್ರಂಥವಾದರೂ ಜ್ಞಾನಶಕ್ತಿಯಿಂದ ತುಂಬಿ ನಿಭೀಡಿಕೃತವಾಗಿರುತ್ತವೆ. ನಮ್ಮ ಗ್ರಂಥವನ್ನು ಯಾರು ಗೌರವಿಸಿ ವಿನಯದಿಂದ, ಭಕ್ತಿ ಭಾವದಿಂದ ಹತ್ತಿರ ಇಟ್ಟುಕೊಂಡರೂ ಅವರಲ್ಲಿನ ರೋಗ ಭೂತಗಳು ಸಹ ನಮ್ಮ ಗ್ರಂಥಗಳನ್ನು ಗೌರವಿಸಿ, ಮನುಷ್ಯರ ಶರೀರಗಳಿಗೆ ಅಂಟಿಕೊಂಡು ಹೋಗುತ್ತಿವೆ. ಶರೀರದಲ್ಲಿನ ರೋಗ ಭೂತಗಳು ಕೂಡಾ ನಮ್ಮ ಗ್ರಂಥಗಳನ್ನು ಕೆಳಗೆ ಬೀಳದಂತೆ ಗೌರವದಿಂದ ಹಿಡಿದುಕೊಂಡು, ಗ್ರಂಥಗಳನ್ನು ಗೌರವಿಸುತ್ತಿವೆ. ಇದೆಲ್ಲವೂ ಹೇಳಿದರೇ ನಂಬಲಾರದ ವಿಷಯವಾದರೂ ಕಣ್ಣಿನಿಂದ ಪ್ರತ್ಯಕ್ಷವಾಗಿ ನೋಡಿದಾಗಾದರೂ ಎಲ್ಲರೂ ತಪ್ಪದೆ ನಂಬಬೇಕಾಗಿದ್ದೇ.

ಯಾವ ಕಾಲದಲ್ಲಾದರೂ ಜ್ಞಾನವು ಒಂದೇ, ಜ್ಞಾನಶಕ್ತಿಯು ಒಂದೇ ಇರುತ್ತದೆ. ಆದ್ದರಿಂದ ಈ ಕಾಲದಲ್ಲಿಯೂ ಸಹ ದೇವರ ಜ್ಞಾನವನ್ನು ಯಾರಾದರೂ ತಿಳಿಯಬಹುದು, ದೈವಶಕ್ತಿ ಎನ್ನಲಾದ ಜ್ಞಾನಶಕ್ತಿಯನ್ನು ಪಡೆಯಬಹುದು. ಪೂರ್ವಕಾಲದಲ್ಲಿ ಎಷ್ಟೋ ಜ್ಞಾನಶಕ್ತಿ ಹೊಂದಿದವರಿರುತ್ತಿದ್ದರು. ಅಂಥವರಲ್ಲಿ ಬ್ರಹ್ಮವಿದ್ಯೆ ಆದ ದೈವಜ್ಞಾನವನ್ನು ಚೆನ್ನಾಗಿ ತಿಳಿದ ರಾವಣಬ್ರಹ್ಮ ಮೊದಲನೆಯವರೆಂದು ಹೇಳಬಹುದು. ಆದರೇ ಇಂದಿನ ಕಾಲದಲ್ಲಿ ಜ್ಞಾನ ಯಾವುದೋ, ಅಜ್ಞಾನ ಯಾವುದೋ ತಿಳಿಯದ ಮನುಷ್ಯರು ಮಹಾಜ್ಞಾನಿ ಆದ ರಾವಣಬ್ರಹ್ಮನನ್ನು ಅಜ್ಞಾನಿಯಾಗಿ, ದುರ್ಮಾರ್ಗನನ್ನಾಗಿ, ಇನ್ನೂ ನೀಚವಾಗಿ ಹೋಲಿಸಿಕೊಂಡಿದ್ದಾರೆ. ಅಂತಹವರಿಗೆ ಚರಿತ್ರೆ ತಿಳಿಯದು. ಆದ್ದರಿಂದ ಇತರರು ಹೇಳಿದ ಮಾತುಗಳು ಕೇಳಿ ದೈವಜ್ಞಾನಿ ಆದ ರಾವಣಬ್ರಹ್ಮನನ್ನು ಅಜ್ಞಾನಿಯಾಗಿ ಲೆಕ್ಕಿಸಿಕೊಂಡಿದ್ದಾರೆ. ಕೆಲವು ವಿಷಯಗಳಲ್ಲಿ ಅಂದರೆ ಧರ್ಮಾ ಧರ್ಮಗಳ ವಿಷಯದಲ್ಲಿ ನಮಗೆ ಅನುಮಾನಬಂದು ಮನುಷ್ಯರ ಮಾತುಗಳನ್ನು ಕೇಳದಂತೆ ಚರಿತ್ರೆಯನ್ನು ನೋಡಿ ತಿಳಿದುಕೊಂಡರೇ, ರಾವಣಬ್ರಹ್ಮ ಮನುಷ್ಯರು ಅಂದುಕೊಂಡಂತೆ ಕೆಟ್ಟವನಲ್ಲವೆಂದೂ, ಆತನು ಬಹಳ ದೊಡ್ಡವನು ಎಂದು ತಿಳಿದಿದೆ. ಭಗವದ್ಗೀತೆಯಲ್ಲಿ ದೇವರು ಹೇಳಿದ ಜ್ಞಾನದ ಪ್ರಕಾರ ಅಧರ್ಮಗಳ ವರ್ಗದೊಳಗೆ ಯಜ್ಞಗಳು ಹೊ+ರಟುಹೋಗಿವೆ. **ವೇದಗಳ ಅಧ್ಯಯನಗಳು, ದಾನಗಳು, ತಪಸ್ಸುಗಳು, ಯಜ್ಞಗಳು ನಾಲ್ಕು ಅಧರ್ಮಗಳೆಂದು ಭಗವದ್ಗೀತೆ ನಿರ್ಣಯಿಸಿ ಹೇಳಿದೆ.** ನನ್ನ ಮಾತನ್ನು ನಂಬಲಾರದೆ ಹೋದರೆ ಭಗವದ್ಗೀತೆ ಯಲ್ಲಿನ ವಿಶ್ವರೂಪ ಸಂದರ್ಶನಯೋಗ ಎನ್ನುವ ಅಧ್ಯಾಯದಲ್ಲಿ 48 ಮತ್ತು 53 ಶ್ಲೋಕಗಳನ್ನು ಗಮನಿಸಿದರೆ ಈ ವಿಷಯ ತಿಳಿಯಬಲ್ಲದು. **ಭಗವದ್ಗೀತೆಯಲ್ಲಿ ಹೇಳಿದ ಕರ್ಮ, ಬ್ರಹ್ಮ, ಭಕ್ತಿ ಯೋಗಗಳೆನ್ನುವ ಮೂರು ಯೋಗಗಳು, ಮೂರು ಧರ್ಮಗಳಾಗಿ ಇವೆ. ವೇದಾಧ್ಯಯನ, ಯಜ್ಞ, ದಾನ, ತಪಸ್ಸುಗಳು ನಾಲ್ಕು ಅಧರ್ಮಗಳಾಗಿವೆ.**

ರಾವಣಬ್ರಹ್ಮ ತ್ರೇತಾಯುಗದಲ್ಲೇ, ದ್ವಾಪರಯುಗದಲ್ಲಿ ಕೃಷ್ಣನು ಹೇಳಿದ ಜ್ಞಾನದ ಪ್ರಕಾರ ಅಧರ್ಮಗಳನ್ನು ಖಂಡಿಸಿ ಹೇಳುವುದು, ಅಧರ್ಮ ಆಚರಣೆ ಎಲ್ಲಾದರೂ ಆಚರಿಸುವವರು ಇದ್ದರೇ, ಅವರನ್ನು ವಿರೋಧಿಸಿ ಅವರ ಆಚರಣೆಗಳನ್ನು ಭಂಗ ಮಾಡುತ್ತಾ, ದೇವರ ಧರ್ಮಗಳನ್ನು ಪರಿರಕ್ಷಿಸುವುದು ಮಾಡುತ್ತಿದ್ದನು. ತನ್ನ ರಾಜ್ಯದಲ್ಲಾಗಲೀ, ತನ್ನ ರಾಜ್ಯಕ್ಕೆ ಸುತ್ತ ಮುತ್ತ ಎಲ್ಲಾದ ರಾಗಲೀ ಅಧರ್ಮಾಚರಣೆ ಇದ್ದರೇ ಅದನ್ನು ತೀವ್ರವಾಗಿ ಖಂಡಿಸುತ್ತಿದ್ದನು. ಆ ನೇತೃತ್ವದಲ್ಲಿಯೇ ದಕ್ಷಿಣ ಭಾರತದೇಶದಲ್ಲಿ ನಡೆಯುವ ಯಜ್ಞಗಳನ್ನು ಭಂಗಮಾಡಿದ್ದಾನೆ. ಒಂದು ಕಾಲದಲ್ಲಿ ಜ್ಞಾನವೆಂದರೇ ಏನೋ ತಿಳಿಯದ ಸ್ಥಿತಿಯಲ್ಲಿ ರಾವಣಬ್ರಹ್ಮ ಮಾಡಿರುವುದು ತಪ್ಪೆಂದು ಅಂದುಕೊಳ್ಳುತ್ತಿದ್ದೆವು. ಆದರೇ ದೇವರ ಜ್ಞಾನ ತಿಳಿದ ನಂತರ, ಭಗವದ್ಗೀತೆಯಲ್ಲಿನ ಜ್ಞಾನವನ್ನು ಧರ್ಮಗಳನ್ನು ತಿಳಿದ ನಂತರ ರಾವಣಬ್ರಹ್ಮ ಮಾಡಿರುವುದು ತಪ್ಪಲ್ಲವೆಂದು, ಆತನು ದೇವರ ಧರ್ಮಗಳನ್ನು ಕಾಪಾಡಿ ಅಧರ್ಮಗಳನ್ನು ಮನುಷ್ಯರಿಂದ ದೂರ ಮಾಡಬೇಕೆನ್ನುವ ಉದ್ದೇಶದಿಂದ ಆ ದಿನ ಯಜ್ಞಗಳನ್ನು ಭಂಗ ಮಾಡಿದ್ದಾನೆಂದು ತಿಳಿದುಕೊಂಡಿದ್ದೇವೆ. ತ್ರೇತಾಯುಗದಲ್ಲಿ ದೇವರ ಜ್ಞಾನದ ಪ್ರಕಾರ ನಡೆದುಕೊಳ್ಳುವುದೇ ಅಲ್ಲದೇ, ದೇವರ ಜ್ಞಾನವನ್ನು ಪ್ರತ್ಯಕ್ಷ ಆಚರಣೆಯನ್ನು ಮಾಡಿ ತೋರಿಸಿದವನು ರಾವಣಬ್ರಹ್ಮ. ಅಂತಹವನ ಹತ್ತಿರ ಎಷ್ಟೋ ಜ್ಞಾನಶಕ್ತಿ ಇರುತ್ತಿತ್ತು. ಆತನ ಜ್ಞಾನವನ್ನು, ಜ್ಞಾನ ಶಕ್ತಿಯನ್ನು ನೋಡಿದ ದೇವರ ಪಾಲನೆಯಲ್ಲಿರುವ ಭೂತಗಳೆಲ್ಲವೂ ಆತನನ್ನು ಗೌರವಿಸಿ, ಆತನ ಮಾತುಗಳನ್ನು ಕೇಳಿ, ಆತನ ಮಾತುಗಳ ಪ್ರಕಾರ ನಡೆದುಕೊಂಡಿವೆ. ತಾನು ಲಂಕದಲ್ಲಿರುವವರೆಗು ತನ್ನ ಪಟ್ಟಣದಲ್ಲಿ ರೋಗ ಭೂತಗಳಿಂದ ಬಂದಿರುವ ರೋಗಗಳೆಲ್ಲವೂ ಇಲ್ಲದಂತೆ ಹೋಗಬೇಕೆಂದು, ತನ್ನ ಅನುಮತಿ ಇಲ್ಲದೇ ಹೊಸ ರೋಗ ಯಾವುದೂ ತನ್ನ ರಾಜ್ಯದಲ್ಲಿ ಪ್ರವೇಶಿಸಬಾರದೆಂದು ಹೇಳಿದಾಗ, ಆತನ ಮಾತನ್ನು ಗೌರವಿಸಿ ಭೂತಗಳೆಲ್ಲವೂ ಹಾಗೇ ಆಚರಿಸಿವೆ.

ಜ್ಞಾನವನ್ನು ಬೋಧಿಸುವ ಎರಡು ಗುಂಪಿನವರಲ್ಲಿ ವೈಶ್ಯರು ಎನ್ನುವವರು ಬ್ರಾಹ್ಮಣರಿಗಿಂತ ಜ್ಞಾನದ ಹೆಸರುಗಳಲ್ಲಿ ಎರಡು ಹೆಸರುಗಳು ಹೆಚ್ಚಾಗಿ ಪಡೆದಿದ್ದಾರೆಂದು ಹೇಳಿಕೊಂಡಿದ್ದೇವೆ. ಅದರಲ್ಲಿ **"ಕೋಮುಟ"** ಎನ್ನುವ ಹೆಸರು ತಿಳಿದುಹೋಗಿದೆ. ನಂತರ ಕೆಲವು ನೂರು ವರ್ಷಗಳು ಕಳೆದ ನಂತರ, ಜ್ಞಾನದಿಂದ ಕೂಡಿದ ಮತ್ತೊಂದು ಹೆಸರನ್ನು ಇಟ್ಟುಕೊಂಡು ಹಾಗೆಯೇ ಪ್ರಜೆಗಳಿಂದ ಕರೆಸಿಕೊಳ್ಳುತ್ತಿದ್ದರು. ಆಗ ಅವರಿಗೆ ತಿಳಿದ ಜ್ಞಾನದಿಂದ ದೇವರು ಸರ್ವ ಪ್ರಪಂಚವೆಲ್ಲಾ ಅಣುಅಣುವಿನಲ್ಲಿ ವ್ಯಾಪಿಸಿಕೊಂಡಿದ್ದಾನೆಂದು ಗ್ರಹಿಸಿದ್ದಾರೆ. ದೇವರು ಸರ್ವ ಜೀವರಾಶಿಗಳ ಶರೀರಗಳಲ್ಲೇ ಅಲ್ಲದೇ ಶರೀರಗಳ ಹೊರಗೆ ಶೂನ್ಯದಲ್ಲಿಯೂ ವ್ಯಾಪಿಸಿ ತಾನು ಇಲ್ಲದ ಸ್ಥಳವಿಲ್ಲವೆಂದು ಭಗವದ್ಗೀತೆಯಲ್ಲಿ ಹೇಳಿದ ಹಾಗೆ ಇದ್ದಾನೆಂದು ಅವರು ಪ್ರಜೆಗಳಿಗೆ ಬೋಧಿಸುತ್ತಿದ್ದರು. ಅಂದಿನ ಕಾಲದಲ್ಲಿ **"ದೇವರು ಸರ್ವ ವ್ಯಾಪಕನು"** ಎಂದು ತಿಳಿದವರಾಗಿ ಇದ್ದರು. ದೇವರ ಜ್ಞಾನವನ್ನು, ದೇವರು ಸರ್ವವೂ ವ್ಯಾಪಿಸಿದ ವಿಧಾನವನ್ನು ಶಾಶ್ವತವಾಗಿ ಜ್ಞಾಪಕ ಇರುವಹಾಗೆ, ಯಾವಾಗಲೂ ಗುರುತಾಗಿ ಇರುವಹಾಗೆ, ಅದಕ್ಕೆ ಸಂಬಂಧಿಸಿದ ಹೆಸರನ್ನು ಇಟ್ಟುಕೊಳ್ಳಬೇಕೆಂದುಕೊಂಡಿದ್ದಾರೆ. ಕೊನೆಗೆ **"ವ್ಯಾಪರಿ"** ಎನ್ನುವ ಹೆಸರನ್ನು ತಮಗೆ ಇಟ್ಟುಕೊಂಡಿದ್ದಾರೆ. ವ್ಯಾಪರಿ ಎಂದರೇ **"ಸರ್ವವೂ ವ್ಯಾಪಿಸಿದವನು"** ಎಂದು ಅರ್ಥ. ಈ ರೀತಿ ಚಂದ್ರವಂಶ ಬೋಧಕರು ಸೂರ್ಯವಂಶ ಬೋಧಕರಿಗಿಂತ ಸ್ವಲ್ಪ ಮುಂದುವರೆದು ಅವರಿಗಿಂತ ತಮಗೇ ಹೆಚ್ಚಿನ ಹೆಸರುಗಳಿರುವಹಾಗೆ, ಆ ಹೆಸರುಗಳೆಲ್ಲವೂ ದೇವರ ಜ್ಞಾನಕ್ಕೆ ಸಂಬಂಧಿಸಿರುವಂತೆ ಇಟ್ಟುಕೊಳ್ಳುವುದು ನಡೆದಿದೆ. ಆ ರೀತಿ ಅವರು ಇಟ್ಟುಕೊಂಡಿರುವ ಹೆಸರುಗಳಲ್ಲಿ ಮೊದಲನೆಯದು ವಾರ್ತಕನು, ಎರಡನೆಯದು ಶ್ರೇಷ್ಠಿ, ಮೂರನೆಯದು ಗುಪ್ತಜ್ಞಾನಿಗಳು, ನಾಲ್ಕನೆಯದು ಕೋಮುಟ, ಐದನೆಯದು ವ್ಯಾಪರಿ. ಈ ರೀತಿ ಅವರು ದೈವಜ್ಞಾನ ಸಾರಾಂಶದೊಂದಿಗೆ ಕೂಡಿಕೊಂಡ ಹೆಸರುಗಳಿಟ್ಟುಕೊಳ್ಳುವುದು ನಡೆದಿದೆ. ಆ ದಿನದ ಪ್ರಜೆಗಳು ಆ ಹೆಸರುಗಳೊಂದರ ಅರ್ಥವನ್ನು ತಿಳಿದು, ಆ ಹೆಸರುಗಳಿಂದಲೇ ಕರೆಯುತ್ತಿದ್ದರು.

"ತಾನೊಂದು ಬಯಸಿದರೆ ಮಾಯೆ ಮತ್ತೊಂದು ಬಯಸಿದೆಯೆಂದು" ಹಿರಿಯರು ಹೇಳಿದ ಹಾಗೆ ಅವರು ಎಷ್ಟೋ ಸಾರಾಂಶದಿಂದ ಕೂಡಿಕೊಂಡ ಹೆಸರುಗಳನ್ನು ಜ್ಞಾನ ನೆನಪಿರುವಹಾಗೆ ಇಟ್ಟುಕೊಂಡರೂ, ಸ್ವಲ್ಪ ಕಾಲಕ್ಕೆ ಅವು ಸ್ವಲ್ಪ ಬದಲಾವಣೆಯಾಗಿ ಬೇರೆ ವಿಧವಾಗಿ ಅರ್ಥವಿಲ್ಲದವುಗಳಾಗಿ ಕರೆಯಲಾಗುತ್ತಿದ್ದವು. ಚಂದ್ರವಂಶದವರು ಇಟ್ಟುಕೊಂಡ ಮೊದಲನೇ ಹೆಸರು "ವಾರ್ತಕನು" ಆದಾಗ ಅದು ಸ್ವಲ್ಪ ಕಾಲಗರ್ಭದಲ್ಲಿ ಬದಲಾವಣೆಯಾಗಿ "ವಾ"ಗೆ ಇರುವ ದೀರ್ಘ ಹೋಗಿ ಕೊನೆಗೆ **"ವರ್ತಕನು"** ಆಗಿದೆ. ನಂತರ ಎರಡನೇ ಹೆಸರು **"ಶ್ರೇಷ್ಠಿ"** ಆದಾಗ ಅದು ಸ್ವಲ್ಪ ಕಾಲಗರ್ಭದಲ್ಲಿ ಬೆರೆತುಹೋಗಿ **"ಶೆಟ್ಟಿ"** ಆಗಿದೆ. ಮೂರನೇ ಹೆಸರು ಎಷ್ಟೋ ಬುದ್ಧಿವಂತಿಕೆಯಿಂದ "ಗುಪ್ತ ಜ್ಞಾನಿಗಳು" ಎಂದು ಹೇಳಿಕೊಂಡಾಗ ಅದರಲ್ಲಿ ಸ್ವಲ್ಪ ಭಾಗ ಹೋಗಿ ಸ್ವಲ್ಪ ಭಾಗ ಉಳಿದು "ಗುಪ್ತ"ವರೆಗು ಉಳಿದುಕೊಂಡಿದೆ. ನಾಲ್ಕನೇ ಬಾರಿ ದೊಡ್ಡ ಜ್ಞಾನವನ್ನು ಉಪಯೋಗಿಸಿ ಭಗವದ್ಗೀತೆಯಲ್ಲಿ ಹೇಳಿದ ಮೂರು ಆತ್ಮಗಳ ವಿಷಯ ಎಲ್ಲರಿಗೂ ತಿಳಿಯುವಹಾಗೆ ತಮ್ಮ ಹೆಸರಿನಲ್ಲಿ ಇರಬೇಕೆನ್ನುವ ಆಸೆಯಿಂದ **"ತ್ರೈತ ಸಿದ್ಧಾಂತ"** ಅವರ ಹೆಸರಲ್ಲಿ ಕಾಣಿಸುವ ಹಾಗೆ **"ಕೋಮುಟ"** ಎಂದು ಒಳ್ಳೆಯ ಹೆಸರನ್ನು ಇಟ್ಟುಕೊಂಡಾಗ, ಮಾಯಾ ಪ್ರಭಾವದಿಂದ ಮನುಷ್ಯರಿಗೆ ತಿಳಿಯದಂತೆ ಆ ಪದವನ್ನು ಹೇಳುವುದರಲ್ಲಿ ಬಾಯಿತಿರುಗದೇ ಕೊನೆಗೆ **"ಕೋಮಟಿ"**ಯಾಗಿ ಕರೆಯಲಾಗಿದೆ. ಕೊನೆಯಲ್ಲಿ ದೇವರು ಪ್ರಪಂಚವೆಲ್ಲಾ ವ್ಯಾಪಿಸಿದ್ದಾನೆಂದು ಎಲ್ಲರಿಗೂ ತಿಳಿಸುವ ನಿಮಿತ್ತ, **"ದೇವರು ಸರ್ವವ್ಯಾಪಿ"** ಎಂದು ನೆನಪಿರುವಹಾಗೆ ತಮ್ಮ ಹೆಸರಲ್ಲಿ ಆ ಅರ್ಥ ಒಳಗೊಂಡಿರಬೇಕೆಂದು, ಎಷ್ಟೋ ಜ್ಞಾನದಿಂದ ಕೂಡಿಕೊಂಡ ಹೆಸರಾಗಿ "ವ್ಯಾಪರಿ" ಎಂದು ನಾಮಕರಣ ಮಾಡಿಕೊಂಡಾಗ, ಕಾಲಗಮನದಲ್ಲಿ ಅದು ಸ್ವಲ್ಪ ಬದಲಾಗಿ ಕೊನೆಗೆ "ವ್ಯಾಪಾರಿ"ಯಾಗಿ ತಯಾರಾಗಿದೆ.

ಮೊದಲನೆಯ ಹೆಸರಾದ **ವಾರ್ತಕ**ನಲ್ಲಿ (ವಾ)ಗೆ ದೀರ್ಘ ಹೋಗಿ ವರ್ತಕನಾಗಿ ಉಳಿದುಹೋಗಿದೆ. ಕೊನೆಯ ಹೆಸರಾದ **ವ್ಯಾಪರಿ**ಯಲ್ಲಿ ಎರಡನೆ

ಅಕ್ಷರವಾದ (ಪ)ಗೆ ದೀರ್ಘ ಸೇರಿ **"**ವ್ಯಾಪಾರಿ**"** ಎಂದು ಹೇಳುವುದು ನಡೆದಿದೆ. ಈ ಎರಡು ಹೆಸರುಗಳಲ್ಲಿ ಒಂದು ಕಡೆ ದೀರ್ಘ ಹೋಗಿರುವುದರಿಂದ ಪದದಲ್ಲಿನ ಭಾವ ಬದಲಾಗಿಹೋಗಿದೆ. ಮತ್ತೊಂದು ಕಡೆ ಇಲ್ಲದ ದೀರ್ಘ ಬಂದು ಸೇರುವುದರಿಂದ ಭಾವ ಕೆಟ್ಟುಹೋಗಿದೆ. ಮೊದಲು ಕೊನೆಯ ಹೆಸರುಗಳಲ್ಲಿ ಒಂದು ಅಕ್ಷರ ಪೂರ್ತಿ ಬದಲಾಗದಂತೆ, ಇರುವ ಅಕ್ಷರಕ್ಕೇ ಇಲ್ಲದ್ದು ಸೇರುವುದು, ಇರುವುದು ಹೋಗುವುದರಿಂದ ಪದದಲ್ಲಿನ ಭಾವ ಬದಲಾಗಿಹೋಗಿ ನಿಜವಾದ ಅರ್ಥ ಮರೆಯಲ್ಲಿ ಬಿದ್ದುಹೋಗಿದೆ. ಮೂರನೆಯ ಹೆಸರು **"ಗುಪ್ತ ಜ್ಞಾನಿಗಳು"** ಎಂದು ಇರುವಾಗ ಅದರಲ್ಲಿ ಬದಲಾವಣೆಗಳು  ನಡೆಯಲಿಲ್ಲ ಆದರೆ, ಇರುವ ಎರಡು ಭಾಗಗಳ ಪದದಲ್ಲಿ ಅರ್ಧ ಭಾಗ ಉಳಿದುಕೊಂಡು, ಅರ್ಧ ಭಾಗ ಇಲ್ಲದಂತೆ ಹೋಗಿದೆ. ಗುಪ್ತ ಜ್ಞಾನಿಗಳಲ್ಲಿ "ಗುಪ್ತ" ಉಳಿದುಕೊಂಡು "ಜ್ಞಾನಿಗಳು" ಇಲ್ಲದಂತೆ ಹೋಗಿದೆ. ಆಗ ಗುಪ್ತ ಎನ್ನುವ ಪದವೊಂದರ ಅರ್ಥವಾದ **"ರಹಸ್ಯ"** ಎನ್ನುವ ಮಾತು ಮಾತ್ರ ತಿಳಿಯುತ್ತಿದೆ. ಆದರೆ ಯಾವ ರಹಸ್ಯ ಎನ್ನುವುದು ಅಲ್ಲಿ ಇಲ್ಲವಾದ್ದರಿಂದ ಆ ಪದ ಅರ್ಥಹೀನವಾಗಿಹೋಗಿದೆ. "ವಾರ್ತಕನು" ನಂತರ ಚಂದ್ರವಂಶ ಬೋಧಕರಿಗೆ ಅಂದರೇ ಈಗ ವೈಶ್ಯರು ಎಂದು ಕರೆಯಲಾಗುವವರಿಗೆ **"**ಶ್ರೇಷ್ಠಿ**"** ಎನ್ನುವ ಹೆಸರು ಹೇಳಲಾಗಿದೆ. ಮನುಷ್ಯರಲ್ಲಿ ಶ್ರೇಷ್ಠವಾದವರು, ಜ್ಞಾನದಲ್ಲಿ ಶ್ರೇಷ್ಠವಾದ ಜ್ಞಾನ ಇರುವವನು ಎಂದು ಅರ್ಥವಿದ್ದರೂ, ಅದು ಮಾಯಾ ಪ್ರಭಾವದಿಂದ **"**ಶ್ರೇಷ್ಠಿ**"** ಎಂಬ ಪದದಲ್ಲಿರುವ ಎರಡು  ಅಕ್ಷರಗಳು ಬದಲಾಗಿ ಹೋಗಿ **"**ಶೆಟ್ಟಿ**"**  ಎಂಬ ಪದವಾಗಿ ಉಳಿದುಕೊಂಡಿದೆ. ಅದರಿಂದ ಶ್ರೇಷ್ಠಿಗಳು ಎಂಬ ಹೆಸರು ಹೋಗಿ ಶೆಟ್ಟಿಯವರು ಎಂದು ಪ್ರಜೆಗಳು ಕರೆಯುವುದನ್ನು ಪ್ರಾರಂಭಿಸಿದ್ದಾರೆ. ಈ ರೀತಿ ಶೆಟ್ಟಿ ಎಂಬ ಅರ್ಥಹೀನವಾದ ಪದ ಬಂದು ತಗುಲಿಕೊಂಡಿದೆ. ಹಾಗೆಯೇ **"**ಕೋಮುಟ**"** ಎನ್ನುವ ಹೆಸರನ್ನು ಎಷ್ಟೋ ಜ್ಞಾನದಿಂದ ಜೋಡಿಸಿ ಇಟ್ಟಿರುವುದಾದರೆ, ಅದರಲ್ಲಿ ಮೂರು ಆತ್ಮಗಳ ವಿವರ ಒಳಗೊಂಡಿರುವಾಗ, ಕೊನೆಗೆ ಮನುಷ್ಯರಲ್ಲಿನ ಅಜ್ಞಾನ ಆ ಪದವನ್ನೂ ಸಹ ಬದಲಾಯಿಸಿ **"**ಕೋಮಟಿಯವರು**"** ಎನ್ನುವಂತೆ ಮಾಡಿದೆ.

ಸೂರ್ಯವಂಶ ಬೊಧಕರಾದ ಬ್ರಾಹ್ಮಣರು **ಪೌರೋಹಿತರು, ಭೂಸುರರು, ಬ್ರಹ್ಮಜ್ಞಾನಿಗಳು** ಎನ್ನುವ ಮೂರು ಹೆಸರುಗಳ ಹತ್ತಿರ ನಿಂತುಹೋಗಿ ಜ್ಞಾನಬೋಧನೆಗಳ ಮೇಲೆ ಆಸಕ್ತಿ ಇಲ್ಲದವರಾಗಿ ತಮ್ಮ ಕೆಲಸಗಳಲ್ಲಿ ತಾವಿರುವಾಗ, ಚಂದ್ರವಂಶ ಬೋಧಕರು ತಮ್ಮನ್ನು ಐದು ಹೆಸರುಗಳಿಂದ ಪ್ರಜೆಗಳು ಕರೆಯುವಹಾಗೆ ಮಾಡಿಕೊಂಡು ಬ್ರಾಹ್ಮಣರಿಗಿಂತ ಬುದ್ಧಿಯಲ್ಲಿ ದೊಡ್ಡವರಾಗಿ ಪ್ರಕಟಿಸಿಕೊಂಡಿದ್ದಾರೆ. ಕೋಮಟಿಯವರೆಂದರೇ ಬುದ್ಧಿವಂತರೆನ್ನುವ ಹೆಸರು ತಂದುಕೊಂಡಿದ್ದಾರೆ. ಸಮಾಜದಲ್ಲಿ ಕೋಮಟಿಯವರೆಂದು, ಶೆಟ್ಟಿಯವರೆಂದು ಕರೆಯಲಾಗುವವರು ತಮಗಿಂತ ದೊಡ್ಡದಾಗಿ ಎರಡು ಹೆಸರುಗಳು ಹೆಚ್ಚಾಗಿ ಇಟ್ಟುಕೊಳ್ಳುವುದು ಬ್ರಾಹ್ಮಣರಿಗೆ ಸರಿಹೋಗಲಿಲ್ಲ. ಮೊದಲಿನಿಂದ ಒಬ್ಬರ ಮೇಲೆ ಒಬ್ಬರು ಅಧಿಕಾರ ಚಲಾಯಿಸುತ್ತಾ ಬಂದರೂ, ಕೊನೆಗೆ ತಾವು ಹಿಂದುಳಿಯುವುದು ವೈಶ್ಯರು ಮುಂದಕ್ಕೆ ಹೋಗುವುದನ್ನು ಬ್ರಾಹ್ಮಣರು ಜೀರ್ಣಿಸಿಕೊಳ್ಳಲಾರದೆ ಹೋದರು. ಭಾರತದೇಶದಲ್ಲಿ ಪೂರ್ವದಿಂದ **"ದ್ರಾವಿಡ"** ಎಂಬ ಭಾರತೀಯರಿರುವಾಗ, ಮಧ್ಯದಲ್ಲಿ ಮಧ್ಯೆ ಏಷಿಯಾದಿಂದ ಆರ್ಯರು ಬಂದು ಅವರಲ್ಲಿ ಬ್ರಾಹ್ಮಣರನ್ನು ಸೇರಿಸಿಕೊಂಡು ಬ್ರಾಹ್ಮಣರಿಂದ ಆರ್ಯ ಸಮಾಜಗಳನ್ನು ಸ್ಥಾಪಿಸುವಂತೆ ಮಾಡಿದ್ದಾರೆ. ಮಧ್ಯ ಏಷಿಯಾದಿಂದ ಬಂದಿರುವ ಬ್ರಾಹ್ಮಣರು ತಮಗಿಂತ ಬುದ್ಧಿವಂತರಾಗಿರುವ ಚಂದ್ರವಂಶ ಬೋಧಕರು **ವರ್ತಕನು, ಶೆಟ್ಟಿ, ಗುಪ್ತ, ಕೋಮಟಿ, ವ್ಯಾಪಾರಿ** ಎಂಬ ಹೆಸರುಗಳಿಂದ ಇರುವವರನ್ನು ನೋಡಿ ಸಹಿಸಲಾರದೆ, ಮೊದಲಿನಿಂದ ಸೂರ್ಯ ಚಂದ್ರ ವಂಶಗಳ ಬೋಧಕರಿಗೆ ಅಧಿಕಾರಕ್ಕಾಗಿ ಹೋರಾಟ ಇದೆಯೆಂದು ತಿಳಿದು, ಬ್ರಾಹ್ಮಣರೊಂದಿಗೆ ಸೇರಿ ಹೋದ ಆರ್ಯರು ಬ್ರಾಹ್ಮಣರನ್ನು ಪ್ರೇರೇಪಿಸಿ ಗುಪ್ತ, ಶೆಟ್ಟಿ ಎನ್ನುವವರಿಗೆ ಪ್ರತ್ಯೇಕವಾದ ಹೆಸರು ಇಟ್ಟು ಅಲ್ಲಿಯವರೆಗು ಸಮಾಜದಲ್ಲಿರುವ ಹೆಸರುಗಳೆಲ್ಲವನ್ನೂ ಬಿಟ್ಟು ಪ್ರಜೆಗಳೆಲ್ಲರೂ ತಾವು ಇಟ್ಟಿರುವ ಹೆಸರನ್ನೇ ಹೇಳುವಹಾಗೆ ಮಾಡಬೇಕೆಂದುಕೊಂಡಿದ್ದಾರೆ.

ಅಗಿನಿಂದ ಆರ್ಯರಲ್ಲಿ ಬೆರೆತುಹೋದ ದ್ರಾವಿಡ ಬ್ರಾಹ್ಮಣರು ಆರ್ಯರ ಬುದ್ಧಿಯನ್ನು ಜೊತೆ ಮಾಡಿಕೊಂಡು ಆರ್ಯರ ಸಹಾಯದಿಂದ ಶೆಟ್ಟಿಯವರಿಗೆ ಪ್ರತ್ಯೇಕವಾದ ಹೆಸರನ್ನು ಇಡಬೇಕೆಂದುಕೊಂಡರು. ಆರ್ಯರು ಭಾರತದೇಶದಲ್ಲಿ ಪ್ರವೇಶಿಸಿದ ನಂತರ ಬ್ರಾಹ್ಮಣರೆಲ್ಲರೂ ಆರ್ಯರಾಗಿ ಬದಲಾಗಿ ತಾವು ದ್ರಾವಿಡರು ಎನ್ನುವ ಮಾತನ್ನು ಮರೆತುಹೋಗಿದ್ದಾರೆ. ಶೆಟ್ಟಿ, ಗುಪ್ತ ಅನ್ನುವವರ ಮುಂದೆ ತಾವು ಕಡಿಮೆಯವರಾಗಿ ಕಾಣಿಸಬಾರದೆಂದು ತಮ್ಮನ್ನು ಸಹ ಆರ್ಯರಾಗಿ ಹೇಳಿಕೊಳ್ಳುತ್ತಿದ್ದರು. ಮಧ್ಯದಲ್ಲಿ ಬಂದಿರುವ ಆರ್ಯರೊಂದಿಗೆ ಬೇರೆತು ಆರ್ಯರ ಬುದ್ಧಿಯನ್ನು ಪ್ರಯೋಗಿಸಿ, ಶೆಟ್ಟಿ ಎನ್ನುವವರು ಆರ್ಯರ ನಂತರದವರಾಗಿಯೇ ಇರಬೇಕೆಂದು ತಿಳಿದು, ಅದೇ ರೀತಿಯಲ್ಲಿ ಶಾಶ್ವತವಾಗಿ ಜನರಿಗೆ ಕಾಣಿಸುವಹಾಗೆ ಒಂದು ಹೆಸರನ್ನು ಆಯ್ಕೆಮಾಡಿಕೊಂಡು ಅದನ್ನು ಚಂದ್ರವಂಶ ಬೋಧಕರಿಗೆ (ಶೆಟ್ಟಿ, ಗುಪ್ತ ಎಂದು ಕರೆಯಲ್ಪಡುವವರಿಗೆ) ಆ ಹೆಸರನ್ನು ಇಡುವುದು ನಡೆದಿದೆ. ಆ ಹೆಸರಲ್ಲಿ ಮೊದಲು ಆರ್ಯ ಎನ್ನುವ ಶಬ್ಧವಿದ್ದು ನಂತರ ವೈಶ್ಯ ಎಂಬ ಪದವಿರುವಹಾಗೆ ಮಾಡಿ ಆರ್ಯವೈಶ್ಯ ಎನ್ನುವುದನ್ನು ಅಗಿನ ಪ್ರಜೆಗಳಲ್ಲಿ ಪ್ರಚಾರ ಮಾಡಿದ್ದಾರೆ. ಹಾಗೆ ಆರ್ಯರಿಂದ ಶೆಟ್ಟಿ, ಗುಪ್ತ ಎನ್ನುವವರಿಗೆ ಕೊಡಲಾಗಿರುವ ಬಿರುದಾಗಿ **“ಆರ್ಯವೈಶ್ಯ”** ಎಂಬ ಹೆಸರು ಬಂದಿದೆ. ಹಾಗೆ ಇಟ್ಟಿರುವ ಹೆಸರನ್ನೇ ಇಂದಿಗೂ ಇರುವಹಾಗೆ ಆರ್ಯರು ಮಾಡಿದ್ದಾರೆ. ಅರ್ಯವೈಶ್ಯ ಎಂಬ ಮಾತನ್ನನುಸರಿಸಿ ‘ಆರ್ಯರ ನಂತರದವರೇ ವೈಶ್ಯರು’ ಎಂದು ಅರ್ಥವಾಗುವಂತೆ ಮಾಡಿದ್ದಾರೆ. ಅಷ್ಟೇ ಅಲ್ಲದೆ ಯಾರಾದರೂ ಬಾಯಿ ತಿರುಗದವರು, ಪದವನ್ನು ಸರಿಯಾಗಿ ಹೇಳಲಾರದವರು ಹೇಳಲಾರದೇ ಹೋದರೇ ಆ ಪದ ‘ಆರ್ಯವೇಶ್ಯ’ ಎಂಬ ಪದವಾಗಿ ಹೇಳಲಾಗುತ್ತದೆನ್ನುವ ಉಪಾಯದಿಂದ ಆರ್ಯರಾದವರು ಆ ಹೆಸರನ್ನು ಶೆಟ್ಟಿ, ಗುಪ್ತ ಎನ್ನುವವರಿಗೆ ಇಟ್ಟಿದ್ದಾರೆ. ಯಾರಾದರೂ ಪದ ಉಚ್ಛಾರಣೆ ಸರಿಯಾಗಿ ಇಲ್ಲದವರು, ಸರಿಯಾಗಿ ಹೇಳಲಾರದವರು ‘ಆರ್ಯವೈಶ್ಯ’ ಎಂಬ ಪದಕ್ಕೆ ಬದುಲು ‘ಆರ್ಯವೇಶ್ಯ’ ಎಂದು ಹೇಳುವುದು ನಡೆಯುತ್ತಿದೆ. ಅದರಿಂದ ‘ಆರ್ಯರಿಗೆ ವೇಶ್ಯರಾಗಿ ಇರುವವರು’ ಎಂದು ಅರ್ಥ ಬರಬಲ್ಲದೆಂದು ಆರ್ಯರ ಬುದ್ಧಿಯನ್ನು ಪ್ರಯೋಗಿಸಿ “ಆರ್ಯವೈಶ್ಯ” ಎಂಬ ಹೆಸರನ್ನು ಇಟ್ಟಿದ್ದಾರೆ.

ಭಾರತದೇಶ ಚರಿತ್ರೆಯಲ್ಲಿ ಭಾರತದೇಶ ಮೊದಲು ಉತ್ತರದಿಂದ ದಕ್ಷಿಣದ ವರೆಗು ದ್ರಾವಿಡ ದೇಶವಾಗಿ ಇರುತ್ತಿತ್ತು. ಆದರೇ ಮಧ್ಯದಲ್ಲಿ ಬಂದಿರುವ ಆರ್ಯರು ಬುದ್ಧಿವಂತರಾದ್ದರಿಂದ, ಅವರ ಬುದ್ಧಿಯಿಂದ ಭಾರತದೇಶವನ್ನು ಸ್ವಲ್ಪಸ್ವಲ್ಪವಾಗಿ ಆಕ್ರಮಿಸಿಕೊಳ್ಳುತ್ತಾ ಬಂದು ಕೊನೆಗೆ ಆರ್ಯದೇಶವಾಗಿ ಪ್ರಕಟಿಸಿದ್ದಾರೆ. ಆದರೇ ತ್ರೇತಾಯುಗದಲ್ಲಿ ರಾವಣಬ್ರಹ್ಮ ಪಾಲನೆ ದಕ್ಷಿಣ ಭಾರತದೇಶದವರೆಗು ಇರುತ್ತಿತ್ತು. ಆದ್ದರಿಂದ ಆರ್ಯರು ದಕ್ಷಿಣ ಭಾರತದೇಶವನ್ನು ಆರ್ಯರ ದೇಶವೆಂದು ಅನ್ನಲಾರದೆ ಹೋಗಿದ್ದಾರೆ. ಆದ್ದರಿಂದ ದಕ್ಷಿಣ ಭಾರತದೇಶವನ್ನು ಇಂದಿಗೂ ದ್ರಾವಿಡ ದೇಶವೆಂದು, ದ್ರಾವಿಡ ಪ್ರಾಂತವೆಂದು ಕರೆಯಲಾಗುತ್ತಿದೆ. ದ್ರಾವಿಡ ಪ್ರಾಂತವಾದ ದಕ್ಷಿಣ ಭಾರತ ದೇಶದಲ್ಲಿ ಈ ದಿನ ಕೂಡಾ ಆರ್ಯರ ಅಧಿಕಾರ ಚಲಾವಣೆ ಆಗುತ್ತಿದೆ. ಆರ್ಯರ ಜ್ಞಾನವೂ ಇದೆ. ದ್ರಾವಿಡರ ಜ್ಞಾನ ಅಡಗಿಸಲಾಗಿದೆ. ಆದ್ದರಿಂದ ಕೆಟ್ಟ ಉದ್ದೇಶದಿಂದ ಆರ್ಯಬ್ರಾಹ್ಮಣರು ಇಟ್ಟಿರುವ ಆರ್ಯವೈಶ್ಯ ಎಂಬ ಹೆಸರು ಇಂದಿಗೂ ಇದ್ದರೂ, ಅದರಲ್ಲಿನ ಆಂತರ್ಯವೇನೆಂದು ಈ ದಿನ ಶೆಟ್ಟಿ, ಗುಪ್ತ ಎನ್ನುವವರು ಕಂಡುಕೊಳ್ಳಲಾರದೆ ಹೋಗಿದ್ದಾರೆ. ಜ್ಞಾನದಿಂದ ಕೂಡಿದ ಐದು ಹೆಸರುಗಳನ್ನು ತಾವು ಇಟ್ಟುಕೊಂಡರೂ, ಅವುಗಳನ್ನು ಮರೆತುಹೋದವರಾಗಿ ಈ ದಿನ ತಾವು ಇಟ್ಟುಕೊಳ್ಳಲಾರದಂತಹ ಇತರ ಬ್ರಾಹ್ಮಣರು ಇಟ್ಟಿರುವಂತಹ 'ಆರ್ಯವೈಶ್ಯ' ಎಂಬ ಹೆಸರನ್ನು ಇಂದಿನ ಶೆಟ್ಟಿಯವರು ಹೇಳಿಕೊಳ್ಳುವುದು ನಡೆಯುತ್ತಿದೆ. 'ಆರ್ಯವೈಶ್ಯ' ಎಂಬ ಮಾತಲ್ಲಿ ಯಾವ ದೈವಜ್ಞಾನ ಸಂಬಂಧ ಅರ್ಥವಿಲ್ಲ. ಚಂದ್ರವಂಶ ಬೋಧಕರಿಗೆ 'ಆರ್ಯವೈಶ್ಯ' ಎಂಬ ಹೆಸರು ಆರನೆಯ ಹೆಸರು ಆಗುತ್ತಿದೆ. ಆರನೆಯ ಹೆಸರು ತಾವು ಇಟ್ಟುಕೊಂಡಿರುವುದು ಅಲ್ಲ. ಇತರರಿಂದ ಇಡಲಾಗಿರುವುದು.

ಎಷ್ಟೋ ಜ್ಞಾನದಿಂದ ಕೂಡಿಕೊಂಡ ತಮ್ಮ ಹೆಸರುಗಳು ತಮ್ಮ ಮುಂದೆಯೇ ಸ್ವಲ್ಪ ಬದಲಾಗಿದ್ದರೂ ಈ ದಿನ ಕಂಡುಕೊಳ್ಳದ ಕೋಮಟಿಗಳು, ತಮಗೆ ಪೂರ್ವದಲ್ಲಿ ತಮ್ಮ ವಂಶದ ಹಿರಿಯರು ಇಟ್ಟಿರುವ ಹೆಸರುಗಳು ಎಷ್ಟೋ ಜ್ಞಾನದಿಂದ ಕೂಡಿಕೊಂಡಿವೆಯೆಂದು ತಿಳಿಯದ ಶೆಟ್ಟಿಯವರು, ಈದಿನ

ತಮಗಿರುವ ವರ್ತಕನು, ಶೆಟ್ಟಿ, ಗುಪ್ತ, ಕೋಮಟಿ, ವ್ಯಾಪಾರಿ ಎಂಬ ಹೆಸರುಗಳನ್ನು ಸ್ವಲ್ಪ ಬದಲಾಯಿಸಿದರೆ ಪ್ರಪಂಚದಲ್ಲೇ ದೊಡ್ಡ ಜ್ಞಾನವಾಗಿ ಕಾಣಿಸುತ್ತದೆಂದು ತಿಳಿಯದ ವರ್ತಕರು, ಕೆಟ್ಟ ಉದ್ದೇಶದಿಂದ ಆರ್ಯಬ್ರಾಹ್ಮಣರು ಇಟ್ಟಿರುವ ಹೆಸರನ್ನು ತಮ್ಮ ಹೆಸರಾಗಿ ಹೇಳಿಕೊಳ್ಳುತ್ತಿದ್ದಾರೆ. ಅದರಲ್ಲಿನ ಕೆಡಕನ್ನು ಗ್ರಹಿಸದ ಇಂದಿನ ವ್ಯಾಪಾರಿಗಳು, ಸ್ವಲ್ಪ ಆಲೋಚಿಸಿದರೇ, ಪೂರ್ವದ ತಮ್ಮ ಚರಿತ್ರೆ ಹೇಗೆ ಸಾಗಿದೆಯೆಂದು ಹಿಂತಿರುಗಿ ನೋಡಿಕೊಂಡರೇ, ಈದಿನ ನಾವು ಹೇಳುವ ಮಾತುಗಳೆಲ್ಲವೂ ಸತ್ಯವೆಂದು ತಿಳಿದುಹೋಗಬಲ್ಲವು.

ಬ್ರಾಹ್ಮಣರು ಆರ್ಯರು ಬೆರೆತಿರುವ ಆರ್ಯಬ್ರಾಹ್ಮಣರು ಬುದ್ಧಿವಂತಿ ಕೆಯಿಂದ ಬಹೂಕರಿಸಿದ "ಆರ್ಯವೈಶ್ಯ" ಎಂಬ ಬಿರುದನ್ನು ಸ್ವೀಕರಿಸಿ, ಅದನ್ನೇ ಇಂದಿಗೂ ಹೇಳಿಕೊಳ್ಳುವುದು ವರ್ತಕರಲ್ಲಿರುವ ಲೋಪವೇಯೆಂದು ಹೇಳ ಬಹುದು. ವೈಶ್ಯರು ಎಂಬ ಹೆಸರು ತಾವು ಇಟ್ಟುಕೊಳ್ಳದಿದ್ದರೂ, ಅದರಲ್ಲಿ ಜ್ಞಾನ ಏನೂ ಇಲ್ಲದಿದ್ದರೂ, ತಾವು ಇಟ್ಟುಕೊಂಡ ಹೆಸರುಗಳೇ ತಮಗೆ ಮುಖ್ಯವೆಂದು ಅಂದುಕೊಳ್ಳದೇ, ತಮ್ಮ ಹೆಸರುಗಳಲ್ಲಿ ಯಾವ ಹೆಸರನ್ನು ಬರೆಯದೆ ಎಲ್ಲಿ ಬರೆದರೂ ವೈಶ್ಯರೆಂದೂ, ಆರ್ಯ ವೈಶ್ಯರೆಂದು ಬರೆಯುವುದನ್ನು ನೋಡುತ್ತಿದ್ದೇವೆ. ಎಲ್ಲಿ ಬೋರ್ಡು ಕಾಣಿಸಿದರೂ "ಆರ್ಯವೈಶ್ಯ" ಎಂದು ಕಾಣಿಸುತ್ತಿದೆ. ಅಷ್ಟೇ ಅಲ್ಲದೆ ಆರ್ಯವೈಶ್ಯ ಸಂಘಗಳೆಂದು ಸಂಘಗಳಿಗೆ ಹೆಸರುಗಳು ಇಡುವುದು ಕೂಡಾ ನಡೆದಿದೆ. ಈದಿನ ಶೆಟ್ಟಿ, ಗುಪ್ತ ಎಂದು ಪ್ರಜೆಗಳಿಂದ ಕರೆಯಲ್ಪಡುತ್ತಿದೆ, ಶೆಟ್ಟಿ, ಗುಪ್ತ ಎನ್ನುವವರು ಮಾತ್ರ ತಮ್ಮನ್ನು ವೈಶ್ಯರಾಗಿ, ಆರ್ಯ ವೈಶ್ಯರಾಗಿ ಹೇಳಿಕೊಳ್ಳುವುದು ನಡೆಯುತ್ತಿದೆ. ಸಮಾಜದಲ್ಲಿ ಶೆಟ್ಟಿಯವರು ಬುದ್ಧಿವಂತರೆಂದು ಹೆಸರಿದ್ದರೂ, ಕೊನೆಗೆ ಆರ್ಯಬ್ರಾಹ್ಮಣರು ಬೀಸಿದ ಬಲೆಯಲ್ಲಿ ಶೆಟ್ಟಿಯವರು ತಗುಲಿಕೊಂಡು ತಮ್ಮನ್ನು ತಾವು ಮರೆತುಹೋಗಿ, ತಮ್ಮ ಚರಿತ್ರೆಯನ್ನು ತಿಳಿಯದಂತಾಗಿ, ತಾವು ಪ್ರಜೆಗಳಿಗೆ ಜ್ಞಾನವನ್ನು ಬೊಧಿಸುವ ಜ್ಞಾನಿಗಳಾಗಿ ಇರುತ್ತಿದ್ದೇವೆಂದು ತಿಳಿಯದೆ, ತಮ್ಮ ಹಿರಿಯರು ತಮಗೆ ಪೂರ್ವದಲ್ಲಿ ಇಟ್ಟಿರುವ ಐದು ಹೆಸರುಗಳು ಪೂರ್ತಿ

ಜ್ಞಾನದಿಂದ ತುಂಬಿಕೊಂಡಿವೆಯೆಂದು ತಿಳಿಯದೆ ಹೋಗಿ, ಸ್ವಲ್ಪ ಕತ್ತಲಲ್ಲಿ ಬಿದ್ದ ಅವರ ಕಣ್ಣಿಗೆ ಸ್ವಲ್ಪ ಬೆಳಕನ್ನು ತೋರಿಸಿ "ನಿಮ್ಮ ಚರಿತ್ರೆ ಇದು" ಎಂದು ತಿಳಿಸಬೇಕೆಂದುಕೊಂಡಿದ್ದೇವೆ. ನಾನು ದ್ರಾವಿಡ ದೇಶದಲ್ಲಿ ಹುಟ್ಟಿದವನಾದ್ದರಿಂದ ದ್ರಾವಿಡರ ಮೇಲಿರುವ ಅಭಿಮಾನದಿಂದ ಇತ್ತ ದ್ರಾವಿಡ ಬ್ರಾಹ್ಮಣರಿಗೂ ಅತ್ತ ದ್ರಾವಿಡ ಶ್ರೇಷ್ಠರಿಗೂ ಅವರವರ ಚರಿತ್ರೆಯನ್ನು ತಿಳಿಸಿ ಮೊದಲಿಗೆ ನೀವು ದ್ರಾವಿಡರೆಂದೂ, ನಂತರ ನಿಮಗೆ ಆರ್ಯರ ಗಾಳಿ ಸೋಕಿದೆಯೆಂದೂ, ಗತದಲ್ಲಿ ನಿಮ್ಮ ಚರಿತ್ರೆ ಈ ವಿಧವಾಗಿ ಇತ್ತೆಂದು ನಾವು ತಿಳಿಸಬೇಕೆಂದುಕೊಂಡಿದ್ದೇವೆ. ಆ ಪ್ರಯತ್ನದಲ್ಲಿನ ಭಾವದಿಂದಲೇ ಈ ಚಿಕ್ಕ ಗ್ರಂಥವನ್ನು ನಿಮಗೆ ಸೇರಿಸಲಾಗಿದೆ.

ವಾಸ್ತವಕ್ಕೆ ನಾನು ಶೆಟ್ಟಿ ಕುಲಕ್ಕಾಗಲೀ, ಬ್ರಾಹ್ಮಣ ಕುಲಕ್ಕಾಗಲೀ ಸಂಬಂಧವಿಲ್ಲದವನು. ವಾಸ್ತವಕ್ಕೆ ಎಲ್ಲಾ ಕುಲಗಳು ನನ್ನವೇ ಎಂಬ ಭಾವದಿಂದ ಕುಲವಿಲ್ಲದವನೆಂದು ತಿಳಿಸುತ್ತಿದ್ದೇವೆ. ನಾನು ಮನುಷ್ಯನಾಗಿರುವವನಾದ್ದರಿಂದ ಮನುಷ್ಯರೆಲ್ಲರೂ ನನ್ನವರೇ ಎನ್ನುವ ಭಾವದಿಂದ, ನನ್ನ ಜಾತಿಯವರಾದ ಮನುಷ್ಯರು ಅಜ್ಞಾನದಲ್ಲಿ ಇಲ್ಲದಂತೆ ಎಲ್ಲರೂ ಜ್ಞಾನಿಗಳಾಗಿ ಇರಬೇಕೆನ್ನುವ ಉದ್ದೇಶದಿಂದ ಗತದಲ್ಲಿ ನಡೆದ ಚರಿತ್ರೆಯನ್ನು ಬಗೆದು ತೋರಿಸಬೇಕೆಂದು ಕೊಂಡಿದ್ದೇನೆ. ಮನುಷ್ಯರಲ್ಲಿ ಪಾಪಾತ್ಮರು ಇರಬಹುದು, ಪುಣ್ಯಾತ್ಮರು ಇರಬಹುದು. ಅದು ಅವರವರ ಕರ್ಮಕ್ಕೆ ಸಂಬಂಧಿಸಿದ ವಿಷಯ. ಆದರೇ ಎಂತಹ ಪಾಪವನ್ನಾದರೂ ಸುಲಭವಾಗಿ ಜಯಿಸುವ ಉಪಾಯವನ್ನು ಒಂದು ದೈವಜ್ಞಾನದಲ್ಲಿ ಮಾತ್ರ ಇದೆ. ಇದೇ ವಿಷಯವನ್ನೇ ಪ್ರಥಮ ದೈವ ಗ್ರಂಥವಾದ ಭಗವದ್ಗೀತೆಯಲ್ಲಿ ಜ್ಞಾನಯೋಗದಲ್ಲಿ 36, 37 ಶ್ಲೋಕಗಳಲ್ಲಿ **"ಮನುಷ್ಯ ಎಷ್ಟು ಪಾಪಾತ್ಮನಾದರೂ ಕರ್ಮ ಎಂಬ ಮಲಿನ ಸಮುದ್ರವನ್ನು ಜ್ಞಾನವೆಂಬ ಹಡಗಿನಿಂದ ದಾಟಬಲ್ಲೆ"** ಎಂದು ಹೇಳುವುದೇ ಅಲ್ಲದೇ ಪಕ್ಕದಲ್ಲೇ 37ನೇ ಶ್ಲೋಕದಲ್ಲಿ **"ಅಗ್ನಿಯಲ್ಲಿ ಎಷ್ಟು ಕಟ್ಟಿಗೆಗಳನ್ನು ಹಾಕಿದರೂ ಅವು ಸುಟ್ಟು ಬೂದಿಯಾದಂತೆ ಜ್ಞಾನವೆನ್ನುವ ಅಗ್ನಿಯಲ್ಲಿ ಎಷ್ಟು ದೊಡ್ಡ ಕರ್ಮಗಳಾದರೂ ಸುಟ್ಟು ಭಸ್ಮವಾಗಿ ಹೋಗುತ್ತವೆ"** ಎಂದು ಸಹ ಹೇಳಿದ್ದಾರೆ. ಮನುಷ್ಯ ಪೂರ್ವದಲ್ಲಿ ಎಷ್ಟೋ

ಜ್ಞಾನಿಯಾಗಿದ್ದರೂ, ಜ್ಞಾನವನ್ನು ತಿಳಿದವರು ಮೋಕ್ಷವನ್ನು ಹೊಂದಿದಾಗ, ಜ್ಞಾನವನ್ನು ತಿಳಿಯದವರು ಉಳಿದುಹೋದಾಗ ಈದಿನ ಅಜ್ಞಾನ ಭೂಮಿ ಮೇಲೆ ಎಲ್ಲಿ ನೋಡಿದರೂ ಕಾಣಿಸುತ್ತಿದೆ. ಪಾಪವನ್ನು ಮಾಡಿದವರು ಎಷ್ಟೋ ಬಾಧೆಗಳನ್ನು ಅನುಭವಿಸುತ್ತಾ, ಬಾಧೆಪಡುತ್ತಾ ನರಕ ಯಾತನೆಯನ್ನು ಹೊಂದುತ್ತಿದ್ದರೂ, ತನಗೆ ಏಕೆ ಹೀಗೆ ನಡೆಯುತ್ತಿದೆಯೆಂದು ಅಲೋಚಿಸುತ್ತಿಲ್ಲ. ಪೂರ್ವದಲ್ಲಿ ಸಾಮಾಜಿಕ ಸೌಕರ್ಯಗಳು ನಾಗರಿಕತೆ ಇಲ್ಲದಿದ್ದರೂ ಆಗ ಬದುಕಿದ ಮನುಷ್ಯರು ಯಾತನೆ ಇಲ್ಲದಂತೆ, ಮನೋವೇದನೆ ಇಲ್ಲದೆ ಸುಖವಾಗಿಯೇ ಜೀವಿಸಿ ಹೋಗಿದ್ದಾರೆ. "ಇಂದಿಗಿಂತಲೂ ಆಗಲೇ ಕಷ್ಟವಾಗಿ ಬದುಕುತ್ತಿದ್ದರು" ಎಂದು ಯಾರಾದರೂ ಅಂದರೆ "ಅದರಲ್ಲಿ ವಾಸ್ತವ ಇಲ್ಲ" ಎಂದು ಹೇಳಬಹುದು. ಆಗ ಕಷ್ಟವಾಗಿದ್ದರೂ, ಅವರು ಬಾಧೆಯನ್ನು ಅನುಭವಿಸದೇ ಕಾಲವನ್ನು ಕಳೆದಿದ್ದಾರೆ.

ಈಗಿನ ಕುಟುಂಬದಲ್ಲಿ ಸೌಕರ್ಯಗಳಿದ್ದರೂ, ಎಷ್ಟೋ ವಸ್ತುಗಳು, ವಾಹನಗಳು ಅವುಗಳಿಂದ ಸುಖಗಳು ಇದ್ದರೂ ಮನುಷ್ಯ ಮಾತ್ರ ಸುಖವಾಗಿ ಬದುಕಲಾರದೆ ಇದ್ದಾನೆ. ಕಾರಣವೇನೆಂದರೇ! ಸಾಮಾಜಿಕ ಸುಖಗಳಾದ ಹಣ, ಮನೆ, ವಸ್ತುಗಳು, ವಾಹನಗಳು, ವಸ್ತ್ರಗಳು ಎಷ್ಟು ಇದ್ದರೂ ಪ್ರಕೃತಿ ಸಂಬಂಧ ಬಾಧೆಗಳು ಹೆಚ್ಚಾಗಿ ಪೂರ್ವಕ್ಕಿಂತ ಹೆಚ್ಚಿನ ಬಾಧೆಗಳನ್ನು ಮನುಷ್ಯ ಅನುಭವಿ ಸುತ್ತಿದ್ದಾನೆ. ಪ್ರಕೃತಿ ಸಂಬಂಧವಾದ ರೋಗಗಳು ಹೆಚ್ಚಾಗಿ ಹೋಗಿವೆ. ರೋಗಗಳೇ ಅಲ್ಲದೆ ಶರೀರ ಬಲಹೀನತೆ ಹೆಚ್ಚಾಗಿ ಎಲ್ಲರಿಗೂ ಬಿ.ಪಿ, ಷುಗರ್ ಎಂಬ ಮಾತು ಬಂದಿದೆ. ಪ್ರಕೃತಿಯಲ್ಲಿನ ಬಿಸಿಲಿಗಾಗಲೀ, ಗಾಳಿಗಾಗಲಿ, ಮಳೆಗಾಗಲೀ ಮನುಷ್ಯ ಸಹಿಸಿಕೊಳ್ಳಲಾರದೆ ಹೋಗುತ್ತಿದ್ದಾನೆ. ಪೂರ್ವದಲ್ಲಿ ಎಂದಿಗೂ ಇಲ್ಲದ ವಿಧವಾಗಿ ಪ್ರಕೃತಿ ವಿಜೃಂಭಿಸಿ ಮನುಷ್ಯನನ್ನು ಹಿಂಸಿಸುವುದು ನಡೆಯುತ್ತಿದೆ. ಮನುಷ್ಯನಿಗೆ ಬರುವ ಬಾಧೆಗಳಲ್ಲಿ ಹೆಚ್ಚಿನ ಶಾತ ಪ್ರಕೃತಿ ಸಂಬಂಧವಾಗಿಯೇ ಇವೆ. ಪ್ರಕೃತಿಯಲ್ಲಿ ಎಷ್ಟೋ ವಿಭಾಗಗಳಾಗಿ ದೇವರ ಪಾಲನೆ ಸಾಗುತ್ತಿದೆ. ದೇವರ ಪಾಲನೆಯನ್ನು ಕಾಣಿಸದ ಗ್ರಹಗಳು, ಭೂತಗಳು ಸಾಗಿಸುತ್ತಿವೆ. ಆದ್ದರಿಂದ ದೈವಜ್ಞಾನವಿಲ್ಲದ ಪ್ರಜೆಗಳನ್ನು ದೇವರ ಪಾಲನೆಯಲ್ಲಿ ರುವ ಗ್ರಹಗಳು, ಭೂತಗಳು

ಅನೇಕ ಕಷ್ಟಗಳ ಪಾಲು ಮಾಡುತ್ತಿವೆ. ಜ್ಞಾನ ತಿಳಿಯದ ಪ್ರಜೆಗಳು ತಮಗೆ ನಡೆಯುವ ಅಪಘಾತಗಳಲ್ಲಿ, ಕಷ್ಟಗಳಲ್ಲಿ ಯಾರ ಪಾತ್ರ ಇದೆಯೆಂದು ಗ್ರಹಿಸಲಾರದೆ ಹೋಗುತ್ತಿದ್ದಾರೆ. ಪ್ರಜೆಗಳಿಗೆ ಕಾಣಿಸುವುದೆಲ್ಲಾ ಸ್ಥೂಲವಾದ ವಿಷಯಗಳೇ, ಸೂಕ್ಷ್ಮವಾಗಿರುವುದು ಯಾವುದೂ ತಿಳಿಯದು. ಗ್ರಹಗಳು, ಭೂತಗಳು ಎಂಬ ದೇವರ ಪಾಲಕರೆಲ್ಲರೂ ಸೂಕ್ಷ್ಮವಾಗಿಯೇ ಇದ್ದು ದೇವರ ಧ್ಯಾಸ ಇಲ್ಲದವರೆಲ್ಲರನ್ನೂ, ಅಜ್ಞಾನದಲ್ಲಿ ಮುಳುಗಿ ಪಾಪಗಳನ್ನು ಮಾಡುವ ವರೆಲ್ಲರನ್ನೂ ಅವರ ಕರ್ಮದ ಪ್ರಕಾರ ಹಿಂಸಿಸುತ್ತಿದ್ದಾರೆ. ಈದಿನ ಮಾನವ ಜೀವನಗಳೆಲ್ಲವೂ ಮೇಲ್ನೋಟಕ್ಕೆ ಚೆನ್ನಾಗಿ ಕಾಣಿಸುತ್ತಿದ್ದರೂ, ಒಳಗೆ ಮಾತ್ರ ಯಾತನೆಯೊಂದಿಗೆ ಕೂಡಿಕೊಂಡಿವೆ. ಹಾಗೆ ನಡೆಯುವುದಕ್ಕೆ ಕಾರಣ ಮನುಷ್ಯ ಜೀವನದಲ್ಲಿ ದೈವಜ್ಞಾನ ಎನ್ನುವುದು ಇಲ್ಲದಂತೆ ಹೋಗುವುದೇ ಮುಖ್ಯ ಕಾರಣವೆಂದು ಹೇಳಬಹುದು. ಇಂತಹ ಪರಿಸ್ಥಿತಿ ಬರುತ್ತದೆಂದು ಮೊದಲೇ ಊಹಿಸಿದ ಹಿರಿಯರು ದೇವರು ಹೇಳಿದ ಜ್ಞಾನವನ್ನು ಮೂರು ಗ್ರಂಥಗಳ ರೂಪದಲ್ಲಿ ತಿಳಿಸಿ ಹೋಗಿದ್ದಾರೆ. ಪ್ರಥಮ, ಮಧ್ಯಮ, ಅಂತಿಮ ದೈವ ಗ್ರಂಥಗಳೆನ್ನುವ ಮೂರು ಗ್ರಂಥಗಳು ಮನುಷ್ಯನಿಗೆ ವಾರಸತ್ವವಾಗಿ ಬಂದಿರುವ ಸ್ಥಿರಾಸ್ಥಿ ಎಂದು ಹೇಳಬಹುದು. ಆದರೇ ಹಿರಿಯರು ಆಸ್ತಿಯನ್ನು ಸಂಪಾದಿ ಸಿಕೊಟ್ಟರೂ, ಚಿಕ್ಕವರು ಕೆಟ್ಟ ವ್ಯಸನಗಳಿಗೆ ಬಲಿಯಾಗಿ ಆಸ್ತಿಯನ್ನು ಕಳೆದು ಕೊಂಡಂತೆ, ಮನುಷ್ಯ ಹೊರಗಿನ ಪ್ರಪಂಚ ವಿಷಯಗಳಲ್ಲಿ ಮುಳುಗಿ ಹೋಗಿ, ವಿಷಯಶ್ರದ್ಧನಾಗಿ ತನಗೆ ತನ್ನ ಹಿರಿಯರಿಂದ ಸಂಕ್ರಮಿಸಿದ ಸ್ಥಿರಾಸ್ಥಿಯಾದ ದೈವಜ್ಞಾನವನ್ನು ಕಳೆದುಕೊಂಡು ಅಜ್ಞಾನಿಯಾಗಿ ಉಳಿದು ಕೊಂಡಿದ್ದಾನೆ. ಇಂದಿನಿಂದಾದರೂ ನಿನ್ನ ಆಸ್ಥಿಯನ್ನು ನೀನು ಸಂಪಾದಿಸಿ ಕೊಳ್ಳುವುದಕ್ಕೆ ಪ್ರಯತ್ನಿಸೆಂದು ಹೇಳುತ್ತಿದ್ದೇವೆ.

*––: ಸಮಾಪ್ತಿ :––*

**ಅಸತ್ಯವನ್ನು ಸಾವಿರ ಜನ ಹೇಳಿದರೂ ಅದು ಸತ್ಯವಲ್ಲ,**

**ಸತ್ಯವನ್ನು ಸಾವಿರ ಜನ ಅಲ್ಲವೆಂದರೂ ಅದು ಅಸತ್ಯವಲ್ಲ.**



ತಪ್ಪದೆ ಓದಿರಿ!

# ಶ್ರೀ ಕೃಷ್ಣನು ದೇವರಾ – ಭಗವಂ

ಈ ಗ್ರಂಥದಿಂದ ಕೃಷ್ಣನೆಂದರೇ ಏನೋ ಯಾರೋ ತಿಳಿದುಹೋಗುವುದು. ದೈವ ತೆಗೆದುಕೊಳ್ಳುವನು ಎನ್ನುವುದಕ್ಕೆ ಇದು ಒಂದು ನಿದರ್ಶನ. ಇದರಿಂದ ಎಷ್ಟೋ ಜ್ಞಾನವನ ಅಲ್ಲದೇ, ಇಲ್ಲಿಯವರೆಗೂ ತಿಳಿಯದ ಆಧ್ಯಾತ್ಮಿಕ ರಹಸ್ಯಗಳೆಷ್ಟೋ ತಿಳಿಯುವುದು. ಈ ಬೇರೆ, ಭಗವಂತನು ಬೇರೆಯೆಂದು ತಿಳಿಯುತ್ತಿದೆ. ಕೃಷ್ಣನು ಮನುಷ್ಯನೇ ಆದರೂ ನಡೆದ ರಹಸ್ಯ ಇಲ್ಲಿಯವರೆಗೂ ಯಾರಿಗೂ ತಿಳಿದಿಲ್ಲ. ಆತನ ಮರಣ ರಹಸ್ಯವ ತಿಳಿದುಕೊಂಡರೇ ಭೂಮಿ ಮೇಲೆ ಮತ ಭೇದಗಳು ಯಾವ ಮಾತ್ರ ಇರುವುದಿ ಮಾಯವಾಗಿ ಹೋಗುತ್ತವೆ.

ರಚಿತ : ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ ಶ್ರೀಶ್ರೀಶ್ರೀ **ಆಚಾರ್ಯ ಪ್ರಬೋಧ**

ಓದಿಸಿರಿ!!

# ಆಧ್ಯಾತ್ಮಿಕ ಪ್ರಶ್ನೆ–ಉತ್ತರಗಳು

ಂಗಗಳಾಗಿ ಇರುವ ಗ್ರಂಥ. ಮೊದಲ ಭಾಗದಲ್ಲಿ ಪಾಠಕರು ಕೇಳಿದ 388 ಪ್ರಶ್ನೆಗಳಿಗೆ ಉತ್ತರಗಳು

ಸವಿವರವಾಗಿ ತಿಳಿಸಿದ್ದಾರೆ. ಈದಿನ ದಕ್ಷಿಣ ಭಾರತದೇಶಕ್ಕೆ ಪರಿಮಿತವಾದ ದ್ರಾವಿಡರ ಮೇಲೆ
ಆಕ್ರಮಿಸಿಕೊಂಡ ಆರ್ಯ ಜಾತಿ ಇಂದಿಗೂ ಆಧಿಪತ್ಯ ನಡೆಸುತ್ತಿರುವುದೆಂಬ ನಗ್ನ ಸತ್ಯ
ತಿಳಿಯಬಹುದು. ಮಾನವಾಕಾರದಲ್ಲಿರುವ ಭಾರತದೇಶದ ಚಿತ್ರ ಪಟ ಗ್ರಂಥದೊಳಗೆ,
ಪಾಠಕರನ್ನು ನಿಶ್ಚೇಷ್ಟರಾಗಿ ಮಾಡುವುದು.

**ರಚಿತ : ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧ**

ಹಿಂದೂ ಪದಕ್ಕೆ ನಿರ್ವಚನ ತಿಳಿಯದೆಂದು ಕೇಂದ್ರ ಹೋಂಶಾಖ ತಿಳಿಸಿತು. ಹಿಂದೂ ಪದದ ನಿರ್ವಚನ ಹೇಳಬೇಕೆಂದು ಮಧ್ಯಪ್ರದೇಶ್‌ಗೆ ಸೇರಿದ ಚಂದ್ರ ಶೇಖರ್ ಗೌರ್ ಎಂಬ ವ್ಯಕ್ತಿ ಸಮಾಚಾರ ಹಕ್ಕಿನ ಕಾನೂನಿಗೆ ಮಾಡಿಕೊಂಡ ಪಿಟೀಷನ್‌ಗೆ ಉತ್ತರ ಕೊಡುತ್ತಾ ಹೋಂಶಾಖೆ ಮೇಲಿನ ರೀತಿಯಲ್ಲಿ ಸ್ಪಂದಿಸಿತು. ಆ ಪದಕ್ಕೆ ಸಂಬಂಧಿಸಿದ ಎಂತಹ ಸಮಾಚಾರ ಇಲ್ಲವೆಂದು ಕೇಂದ್ರ ಪೌರ ಸಂಬಂಧಗಳ ಶಾಖಾಧಿಕಾರಿ ಗುರತಿಸಿದಂತೆ ಕೇಂದ್ರ ತಿಳಿಸಿತು. ಎಂತಹ ನಿರ್ವಚನ ಇಲ್ಲದಿರುವಾಗ ಇಂತಹ ವರ್ಗದವರು ಹಿಂದೂಗಳೆಂದು ಹೇಗೆ ನಿರ್ಧಾರಿಸುತ್ತಿದ್ದೀರೆಂದು, ದೇಶದಲ್ಲಿ ಹಿಂದೂಗಳು ಮೆಜಾರಿಟೀಯಾಗಿ ಇದ್ದಾರೆಂದು ಹೇಗೆ ಹೇಳುತ್ತಿದ್ದೀರೆಂದು ಗೌರ್ ಪ್ರಶ್ನಿಸಿದ್ದಾರೆ.

ಪ್ರಮುಖರ ಲೇಖ



## ಇಂದೂ ದೇಶವೇ ಇಂಡಿಯಾ!

ಹಿಮಾಲಯಗಳಿಗೂ, ವಿಂಧ್ಯ ಪರ್ವತಗಳಿಗೂ ಮಧ್ಯದಲ್ಲಿ ಆದಿನದ ಆರ್ಯಾವರ್ತನ (ಆರ್ಯರ ಭೂಭಾಗ) ಎಲ್ಲಿ ಇದೆಯೋ ನಮ್ಮ ದೇಶಪಟದಲ್ಲಿ ನೀನು ನೋಡಿದ್ದೀಯ. ಅದು ಬಾಲ ಚಂದ್ರಾಕಾರದಲ್ಲಿ ಇರುವಂತೆ ಕಾಣಿಸುತ್ತದೆ. ಅದಕ್ಕೇ ಆರ್ಯಾವರ್ತನಕ್ಕೆ ಇಂದೂ ದೇಶವೆಂದು ಹೆಸರು ಬಂದಿದೆ. ಇಂದೂ ದೇಶವೇ ಹಿಂದೂ ದೇಶವಾಗಿ ಮಾರ್ಪಾಟಾಗಿದೆ.

ರಾಮಯಣ ಹುಟ್ಟಿದ ದೀರ್ಘ ಕಾಲಕ್ಕೆ ಮಹಾಭಾರತ ಹುಟ್ಟಿದೆ. ಅದು ರಾಮಾಯಣಕ್ಕಿಂತ ದೊಡ್ಡ ಗ್ರಂಥ. ಅದರಲ್ಲಿ ಹೇಳಿರುವುದು ಆರ್ಯ ದ್ರಾವಿಡ ಯುದ್ಧವಲ್ಲ. ಆರ್ಯರ ಮಧ್ಯ ಏರ್ಪಟ್ಟ ಕುಟುಂಬ ಕಲಹವೇ ಭಾರತಕಥೆ. ಭಾರತದಲ್ಲಿ ಹೇಳಿದ ಕಥೆಗಳು, ಧರ್ಮಗಳು ಅಷ್ಟಿಷ್ಟಲ್ಲ. ಅವು ಬಹಳ ಸುಂದರವಾಗಿ, ಗಂಭೀರವಾಗಿ ಇರುತ್ತವೆ. ಇವೆಲ್ಲವುಗಳಿಗಿಂತ ದೊಡ್ಡದಾದ ಭಗವದ್ಗೀತೆ ಎಂಬ ಮಹಾಗ್ರಂಥ ಮಹಾಭಾರತದಲ್ಲಿ ಇರುವ ಕಾರಣದಿಂದ ಅದು ನಮ್ಮೆಲ್ಲರಿಗೂ ಪ್ರಿಯತಮ ವಾದದ್ದಾಗಿದೆ. ಸಾವಿರ ವರ್ಷಗಳ ಕೆಳಗೇ ನಮ್ಮ ದೇಶದಲ್ಲಿ ಇಂತಹ ವಿಶೇಷವಾದ ಗ್ರಂಥಗಳು ಹುಟ್ಟಿವೆ. ಮಹಾನುಭಾವರೇ ಇವುಗಳನ್ನು ಬರೆದಿರುತ್ತಾರೆ. ಈ ಗ್ರಂಥಗಳು ಹುಟ್ಟಿ ಇಷ್ಟು ಕಾಲ ಕಳೆದರೂ ಅವುಗಳನ್ನು ಕುರಿತು ತಿಳಿದುಕೊಳ್ಳದಂತಹ ಮಕ್ಕಳು ಮತ್ತು ಪ್ರಯೋಜನವನ್ನು ಪಡೆಯದ ಹಿರಿಯರಂತೂ ಇರುವುದಿಲ್ಲ.

ನೆಹ್ರೂ ಇಂದಿರಗೆ ಬರೆದ ಲೇಖನೆಯಿಂದ

# ಇಂದೂ– ಹಿಂದೂ

**ಇಂದೂ = ಚಂದ್ರನು = ಜ್ಞಾನಿ**
**ಹಿಂದೂ = ಅರ್ಥರಹಿತ = ಜ್ಞಾನವಿಲ್ಲದ** } ಪ್ರಬೋಧಾನಂದ ಯೋಗೀಶ್ವರರು

**ಹಿಂದೂ = ಕಳ್ಳ = ದಯಾನಂದ ಸರಸ್ವತಿ (ಗುರೂಜೀ ಸಮಗ್ರ ಗ್ರಂಥಾವಲಿ)**

**ಹಿಂದೂ=ಬೇವಕೂಫ್=ನೃಸಿಂಹಾನಂದ ಭಾರತಿ (ಹೈಂದವ ಶಂಖಾರಾವಮು)**

▶ ಚಿನಜೀಯರ್ ಮುಂತಾದ ಬಹಳ ಮಂದಿ ಸ್ವಾಮೀಜಿಯರು ಹಿಂದೂ ಶಬ್ದವನ್ನು ಬಳಸಬಾರದೆಂದಿದ್ದಾರೆ. ಆ ಪದವನ್ನು ಬಳಸಿದರೇ ನಮ್ಮ ತಲೆಯನ್ನು ನಾವೇ ಕಡೆದುಕೊಂಡಂತೆ ಎಂದು ತಮ್ಮ ಉಪನ್ಯಾಸಗಳಲ್ಲಿ ಹೇಳಿದ್ದಾರೆ. ಬಹಳ ಮಂದಿ ಸ್ವಾಮೀಜಿಯರು ಈ ಶಬ್ದವನ್ನು ವಿದೇಶೀಯರಾದ ಮುಸ್ಲೀಮ್‌ರು ನಮಗೆ ಅತ್ತಗಟ್ಟುತ್ತಿದ್ದಾರೆ. ಅವರ ಭಾವದಲ್ಲಿ ಹಿಂದೂ ಎಂದರೇ ಬುದ್ಧಿ ಕಡಿಮೆಯವರೆಂದು ಅರ್ಥವಂತೆ.

▶ ಬೃಹಸ್ಪತಿ ಆಗಮವನ್ನು ಅನುಸರಿಸಿ ಪೂರ್ವದಲ್ಲಿ ಈದಿನ ನಾವು ಕರೆಯುವ ಹಿಂದೂ ಸಮುದ್ರವನ್ನು **"ಇಂದೂ ಸರೋವರವೆಂದು"** ಕರೆಯುತ್ತಿದ್ದರು.

▶ ನೆಹ್ರೂ ತನ್ನ ಮಗಳಾದ ಇಂದಿರಾಗಾಂಧೀಯನ್ನು ಪ್ರೀತಿಯಿಂದ ಇಂದೂ ಎಂದು ಕರೆಯುತ್ತಿದ್ದನು. ಇಂದೂ ಎಂದರೇ **'ಜ್ಞಾನಿ'** ಎಂದು ಅರ್ಥ.

▶ ಕಾಶೀ ಇನ್ನೂ ಮುಂತಾದ ನತರಗಳು ಅರ್ಧ ಚಂದ್ರಾಕಾರದ ಆಕೃತಿಯಲ್ಲಿ ಡೊಂಕು ತಿರಿಗಿವೆ. ಚಂದ್ರನನ್ನು **'ಇಂದೂ'** ಎನ್ನುತ್ತಾರೆ.

▶ ಹಿಂದೂ ಸಮುದ್ರ ಜ್ಞಾನ ನಿಲಯಕ್ಕೆ ಗುರುತು ಆದ್ದರಿಂದ ಅದನ್ನು ಪೂರ್ವದಲ್ಲಿ **'ಇಂದೂ ಮಹಾ ಸಮುದ್ರ'**ವಾಗಿ ಕರೆಯುತ್ತಿದ್ದರು. (**"ತ್ರೈತಾಕಾರ ರಹಸ್ಯ"** ಎಂಬ ಗ್ರಂಥದಲ್ಲಿ ಇದೆ.)

▶ ಭಾರತ ದೇಶ ಪೂರ್ವದಲ್ಲಿ ಜ್ಞಾನವಿರುವ ದೇಶ. ಆದ್ದರಿಂದ ಭಾರತದೇಶವನ್ನು ಇಂದೂ ದೇಶವೆಂದೂ, ಭಾರತೀಯರನ್ನು ಇಂದೂಗಳೆನ್ನುತ್ತಿದ್ದರು.

---

**visit website : www.thraithashakam.org**

1. ನಾಲ್ಕು ಅಧರ್ಮಗಳು ಶೇ. ಹತ್ತರಷ್ಟು ಮನುಷ್ಯರಲ್ಲಿರುವಾಗ, ಒಂದು ಮತವೆಂಬ ಅಧರ್ಮ 99 ರಷ್ಟು ಇದೆ.
2. ಯಜ್ಞ, ದಾನ, ವೇದ, ತಪಸ್ಸುಗಳು ನಾಲ್ಕು ಆದಾಗ, ಐದನೆಯ ಅಧರ್ಮ ಮತ.
3. ದೈವ ಮಾರ್ಗಕ್ಕೆ ದೊಡ್ಡ ಆತಂಕ ಮತ.
4. ಎಲ್ಲ ಅಧರ್ಮಗಳನ್ನು ಮೀರಿರುವುದು ಮತವೆಂಬ ಅಧರ್ಮ.
5. ಪ್ರಪಂಚ ಮಾರ್ಗದಲ್ಲಿ ಮತವಿದ್ದರೇ ದೈವ ಮಾರ್ಗದಲ್ಲಿ ಹತವಾಗಿ ಹೋಗುತ್ತೀಯ.
6. ಕಲಿಯುಗದಲ್ಲಿ ಹೊಸದಾಗಿ ಹುಟ್ಟಿ ಬಂದಿರುವ ಐದನೆಯ ಅಧರ್ಮವೇ ಮತ.

ಮೂಲ ಕರ್ತ

ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ಇಂದೂ ಜ್ಞಾನವೇದಿಕೆ




**ಇಂದೂ ಜ್ಞಾನವೇದಿಕೆ (I.G.V)**

**(Regd.No.: 168/2004)**

ಚಿನ್ನಪೊಡಮಲ(ಗ್ರಾ), ತಾಡಿಪತ್ರಿ(ಮಂ), ಅನಂತಪುರಂ (ಜಿಲ್ಲಾ), ಆಂಧ್ರಪ್ರದೇಶ್-515411

e-mail id : info@thraithashakam.org

www. thraithashakam.org

ಮೂಲ ಕರ್ತ

ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ದ್ರಾವಿಡ ಶ್ರೇಷ್ಠಿ ಸಂಘ



